# ಅರೆಭಾಷೆ ಸಂಸ್ಕೃತಿ – ಸಂವಹನ: ಅಂದ್, ಇಂದ್, ಮುಂದ್



ಸೀತಾರಾಮ ಕೇವಳ
ಪ್ರಾಂಶುಪಾಲರು
ವಿದ್ಯಾರಶ್ಮಿ ವಿದ್ಯಾಲಯ
ಸವಣೂರು ಪುತ್ತೂರು. ದ.ಕ. 574 202.
ಮೊಬೈಲ್ ಫೋನ್: 94487 25813.

'ಅರೆಭಾಷೆ ಸಂಸ್ಕೃತಿ–ಸಂವಹನ: ಅಂದ್, ಇಂದ್, ಮುಂದ್'ತೇಳುವ ವಿಚಾರನ ಮಾತಾಡಿಕಾಕನ ನಾ ಸುರೂಗೆ ದೊಡ್ಡ ಅಭಿನಂದನೆ ಕೊಡ್ತು ಕೊಡ್ಗ್‌ನ ಜನಂಗಳಿಗೆ. ಕೊಡ್ಗ್‌ನ ಮಡಿಕೇರಿನ ಆಚೀಚೆ ಮತ್ತು ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯದ ಆಚೀಚೆ ಎಲ್ಲ ಅರೆಭಾಷೆ ಮಾತಾಡುವ ಜನಂಗ ಒಳೊ. ಈ ಎರ್ಡ್ ಕಡೆನ ಜನಂಗಳ ಪೈಕಿ ಅರೆಭಾಷೆನ ಖುಷಿ ಮತ್ತು ಗೌರವ ಪೂರ್ವಕವಾಗಿ ಸರಾಗವಾಗಿ ಎಲ್ಲ ಕಡೆಲಿ ಮಾತಾಡುವ ಕ್ರಮನ ನೋಡ್ರೆ ಕೊಡ್ಗ್‌ನ ಅರೆಭಾಷಿಕರ್ ಒಂದು ಕೈ ಮೇಲೆ ಒಳೊ. ಹಂಗಾಗಿ ಕೊಡ್ಗ್‌ನವ್ಕೆ ಅಭಿನಂದನೆಗಳ ನಾ ಕಂಡಿತ ಹೇಳಕಾದೆ.

ಅರೆಭಾಷೆ ತೇಳುವಂತದ್ ಇಂದ್ ಒಂದು ಪ್ರಾದೇಶಿಕ ಭಾಷೆ ಆಗಿ ಉಟ್ಟು. ಕೊಡ್ಗ್‌ಲಿ ಆಗಲಿ ಸುಳ್ಯಲಿ ಆಗಲಿ ಅರೆಭಾಷೆನ ಎಲ್ಲ ಜಾತಿ, ಧರ್ಮ ಮತ್ತು ಇತರ ಸಮುದಾಯದವು ಮಾತಾಡ್ತಿದ್ದರುನೂ ಅದರ ಹೆಚ್ಚಿಗೆ ಬಳಕೆ ಮಾಡ್ತಿರ್ದು ಗೌಡುಗ. ಹಂಗಾಗಿ ಅರೆಭಾಷೆ ಮಾತ್‌ನ ಬಗೆಲಾಗಲಿ, ಸಂಸ್ಕೃತಿ–ಸಂವಹನಗಳ ಬಗೆಲಾಗಲಿ ಬರೆಕನ ಬಾರಿ ಸಹಜವಾಗಿ ಗೌಡುಗಳ ಜೀವನ ಪದ್ಧತಿನ ಬಗೆಲಿ ಆಲೋಚನೆ ಹೋದರೆ ಅದ್ ತಪ್ಪಲ್ಲ ತೇಳಿ ನಾ ಗ್ರೈಸಿನೆ.

**ಅರೆ ಭಾಷೆ ಸಂಸ್ಕೃತಿನ ಪಲ್ಲಟ**: ಅರೆ ಭಾಷೆಗೆ ಒಂದು ವಿಶೇಷವಾದ ಸಾಂಸ್ಕೃತಿಕ ಹಿನ್ನೆಲೆ ಉಟ್ಟು. 'ಹುಟ್ಟಿನಿಂದ ಚಟ್ಟದವರೆಗೆ' ತೇಳಿ ಕನ್ನಡ ಭಾಷೆಲಿ ಹೇಳುವಾಂಗೆ ಮೊನ್ನ ಒಬ್ಬ ಹುಟ್ಟಿದಲ್ಲಿಂದ ಹಿಡ್ದ್ ಸಾಯುಕನ ಮುಟ್ಟ ಅವನ ಜೀವಮಾನದ ಕಾಲಲಿ ಅಂವ ಕಾಣಕಾದ ಮತ್ತು ಮಾಡಕಾದ ಸಂಸ್ಕೃತಿ–ಸಂಸ್ಕಾರಗ ಎಷ್ಟೋ ಒಳೊ. ಆದರೆ ಸುಮಾರ್ ಎಲ್ಲ ಅಂತ ಅಂಶಗ ಇಂದ್ ಬದಲಾವಣೆ ಆಗೊಳೊ. ಹೆಚ್ಚು ಕಡಿಮೆ ಎಲ್ಲ ಸಂಸ್ಕೃತಿ–ಸಂಸ್ಕಾರಗಳೂ ಇಂದ್ ಹೊಸ ರೂಪಲಿ ಗೋಚರ ಆಗ್ತಾ ಒಳೊ.

ನಮ್ಮ ಸಂಸ್ಕೃತಿ–ಸಂಸ್ಕಾರಗಳ್ಲಿ ಬದಲಾವಣೆಗ ಆಕೆ ಕಾರಣ ಸುಮಾರ್ ಒಳೊ. ಅದ್ ನಮ್ಮಲ್ಲಿ ಈ ಎಲ್ಲ ಕ್ರಮಗಳ ಹೇಳಿ ಕೊಡುವ ಊರು ಗೌಡ್ರ್‌ಗ ಅಲ್ಲಾರೆ ಹಿರಿಯವರ ತಿಳುವಳಿಕೆಗಳ ಕೊರತೆ, ಆ ಕ್ರಮಗಳ ಕಲಿಕೆ ಈಗನ ತಲೆಮಾರ್‌ನ್ಕೆ ಮನ್ಸ್ ಇಲ್ಲದಿರ್ದು, ನಮ್ಮ ಮೇಲೆ ಬೇರೆವರ ಮತ್ತು ಬೇರೆ ಸಂಸ್ಕೃತಿಯುವ ಪ್ರಭಾವ, ಹೊಸ ಬಗೆಲಿ ಕಾರ್ಯಕ್ರಮಗಳ ಮಾಡೊಕು ತೇಳಿ ಹೊರ್ಡುವ ಬರಲಿ ಆಲೋಚನೆ ಇಲ್ಲದೆ ಹೊಸ ರೀತಿನ ಅಳವಡಿಸಿಕಂಬ ರೀತಿ, ಸಾಂಪ್ರದಾಯಿಕ ರೀತಿಲಿ ಮಾಡಿಕೆ ಮನ್ಸ್ ಇದ್ದರುನೂ ಅದ್ಕೆ ಬೇಕಾದ ಸಾಮಾನ್‌ಗ, ಹತ್ಯಾರ್‌ಗ ಎಲ್ಲ ಸಿಕ್ಕದಿರುವಂತದ್, ಹಿಂಗೆ ಬೇರೆ ಬೇರೆ ಕಾರಣಗ ಕಂಡವೆ. ಏಂತದಿದ್ದರುನೂ ಈ ಬದಲಾವಣೆಗ ಬಗೆಲಿ ಹಜ ಆಲೋಚನೆ ಮಾಡ್ರೆ ಅದರಲ್ಲಿ ನಾವು ಮೂಲ ರೂಪಕ್ಕೆ ತರೊಕು ತೇಳುವ ಮನ್ಸ್ ನಾವ್ಗೆ ಬಂದದೆ. ಆದರೆ ಅದರ ಹಂಗೆ ವಪಾಸ್ ಮೂಲ ರೂಪಕ್ಕೆ ತಾಕೆ ಆದನಾ ಇಲ್ಲೆನಾ ತೇಳ್ದೊರ ಆಲೋಚನೆ ಮಾಡಿಕನ ಅಲ್ಲಿನೂ ನಾವ್ಗೆ ಬಂಗ ಕಂಡವೆ.

1. **'ಹುಟ್ಟು'ನ ವಿಸಯಲಿ ಆಗಿರುವ ಪಲ್ಲಟ**: ಮುಂದೆನ ಕಾಲಲಿ ಒಂದು ಕೂಸ್ ಹುಟ್ರೆ ಅಲ್ಲಿಂದ ಮುಂದೆ 16 ದಿನಗಳವರೆಗೆ ಕುಟುಂಬದ ಎಲ್ಲವ್ಕನೂ ಸೂತಕ ಇರ್ತಿತ್. ಆ ಸೂತಕದ ಕ್ರಮಾಚರಣೆಗ ಇಂದಿಗಾಕನ ಕೆಲವು ಕುಟುಂಬಗಳ್ಲಿ ಹಜ ಹಜ ಒಳ್ಕಂಡ್ ಬಂದುಟು. ಸೂತಕದ ದಿನಗಳ್ಲಿ ಕುಟುಂಬದವು ಯಾವುದೇ ದೇವಸ್ಥಾನ, ದೈವಸ್ಥಾನಗಳಂತ ಒಳ್ಳೆ ಜಾಗೆಗಳಿಗೆ ಹೋಕೆ ಆಗದ್.

ಕೂಸು ಹುಟ್ಟಿದ 11ನೆ ದಿನದಂದ್ ಊರುನ ಮಡ್ವಾಳ್ತಿ ಬಂದ್ ಮನೆಸುದ್ದ ಮಾಡೊಕು. ಅದರ 'ಅಮೆ' ಮಾಡ್ತುತೇಳುವೆ. ಅಲ್ಲಿಂದ ವಪಾಸ್ 5 ದಿನಗ ಕಳ್ದ್ ಅದಮೇಲೆ, ತೇಳ್ರೆ 16ನೆ ದಿನಕ್ಕಾಕನ ಕೂಸುನ ತೊಟ್ಟಿಲ್‌ಗೆ ಹಾಕುವ ಕ್ರಮ. ಕೆಲವು ಕಡೆಲಿ ಕೂಸು ಹುಟ್ಟಿದ ತಿಂಗಳ್ಲಿ ಅದರೆ 11, 12 16 20 ಮತ್ತು 22ನೆ ದಿನಲಿನಾನು ಈ ಕಾರ್ಯಕ್ರಮನ ಮಾಡ್ತಿದ್ರೊ. ಹಂಗನೆ ಕೂಸು ಹುಟ್ಟಿದ ತಿಂಗಳ್ಲಿ ಮಾಡಿಕೆ ಅತ್ಲಾರ್ ಮೂರ್ನೆ ಅಲ್ಲಾರೆ ಐದ್ನೆ ತಿಂಗಳ್ಲಿನಾನು ಮಾಡ್ತಿದ್ರೊ.

ಅಂದ್ ಕೂಸುಗೆ ಹೆಸರ್‌ನಾನು ಇಡುವೆ. ಕೂಸು ಹುಟ್ಟಿದ ಹೊತ್ತುನ ಹೇಳಿ, ಯಾರ್ಯಾರ್ ಪಂಚಾಂಗ ನೋಡಿಕೆ ಗೊತ್ತಿದ್ದವರೊಟ್ಟಿಗೆ ಕೇಳ್‌ಕಂಡ್ ಸರಿಯಾದ ಮತ್ತು ಖುಷಿ ಆಗುವ ಹೆಸರ್‌ನ ಆ ಕೂಸಿಗೆ ಇಡುವೆ. ಕೂಸುನ ತೊಟ್ಟಿಲ್‌ಗೆ

ಅದೆ. ಹಂಞ ದುಡ್ಡು ಹೆಚ್ಚಿಗೆ ಖರ್ಚಾದರುನು ವ್ಯವಸ್ಥೆ ಪೋರ್ಲುನಲಿ ಅದೆ. ಹಂಗನೇ ಮುಂದೆಲ್ಲ ಕೂಡಿ ಕಡುಗ ಹಾಡಿ ಸುಧಾರಣೆ ಮಾಡಿಕಂತಿದ್ದೊ. ಇಂದಿಗಾಕನ ಅದರ ಕೇಟರಿಂಗ್‌ನವ್ಕೆ ವಹಿಸಿ ನೆಮ್ಮದಿಲಿ ಇದ್ದ್ ಒರ್ಚ್ಚುವೆ. ಮುಂದೆಲ್ಲ ನಡ್ಕಂಡ್ ಡೋಲು–ವಾಲಗಗಳೊಟ್ಟಿಗೆ ಹೋತಿದ್ದ ದಿಬ್ಬಣದ ಬದ್ಲಿಗೆ ಇಂದ್ ಬಸ್ ಕಾರಾಗಳ್ಲಿ ಕ್ಯಾಸೆಟ್ಟೊ. ಸಿ.ಡಿ.ಯೋ. ಪೆನ್‌ಡ್ರೈವ್ವೋ. ರೇಡಿಯೊನೋ ಹಾಕಂಡ್ ಪದ್ಯನೋ ಮತ್ತೊಂದೋ ಕೇಳಿಕಂಡ್ ದಿಬ್ಬಣ ಹೋದವೆ. ಹಿಂಗೆ ಸುಮಾರ್ ನಮೂನೆನ ಬದಲಾವಣೆಗ ಆಗಿಬುಟ್ಟೊಳೊ. ಇಂತ ಕೆಲವು ಬದಲಾವಣೆಗಳ ಬಗೆಲಿ ಮಾತ್ರ ಹೇಳಿ ಸಮಯಾವಕಾಶ ಕಮ್ಮಿ ಇರ್ದರ್‌ಂದಾಗಿ ಈ ವಿಸಯನ ಇಲ್ಲಿಗೆ ನಿಲ್ಸಿ ಬುಟ್ಟನೆ.

3. **'ಆಹಾರ'ನ ವಿಸಯಲಿ ಆಗಿರುವ ಪಲ್ಲಟ:** ಹಿಂದೆಲ್ಲ ಗೌಡುಗಳ 'ಅಂಬಲಿ ಗೌಡ' ತೇಳಿ ಗುರ್ತ್ಸುವ ಅಲ್ಲಾರೆ ಡೋಂಗಿ ಮಾಡುವ ಸಂದರ್ಭನೂ ಇತ್ತ್. ಬಾರಿ ಬಡತನಲಿ ಇದ್ದ ಗೌಡುಗ ತಿಂಬಕೆಸಾನು ಬಜ ಬಾತಿದ್ದೊ ಕಾಲ ಅದಾಗಿತ್ತ್. ಹಂಗಾಗಿ ರಾಗಿದ್ದೋ. ಅಕ್ಕಿದ್ದೋ ಅಂಬುಲಿ ಮಾಡಿ ಉಂಬತ್ತಿದ್ದೊ. ಅಂತ ಕಷ್ಟ ಜೀವಿಗ ನಮ್ಮ ಗೌಡ್ರುಗ. ಈಗ ಈ ಅಂಬುಲಿ ತೇಳುವಂತದ್ದ್ ಇಲ್ಲೆ ತೇಳುವಷ್ಟರ ಮಟ್ಟಿಗೆ ಕಡ್ಮೆ ಆಗುಟು. ಎಲ್ಲೋ ಒಂದೆರ್ಡ್ ಕಡೆಗಳ್ಲಿ ಈ ಅಂಬುಲಿ ಉಂಬೊದರ, ಕುಡಿಯೊದರ ಈಗ ನೋಡಕ್ ಅಷ್ಟೆ.

ಸಾಮಾನ್ಯವಾಗಿ ಗೌಡ್ರುಗ ಬೇರ ಬೇರೆ ನಮೂನೆಗಳ ತಿಂಡಿಗಳ ಮಾಡ್ತಿದ್ದೊ. ಸೇಮಿಗೆ. ಪತ್ರೊಡೆ. ಕಾಯಿಗಂಜಿ. ಬೆಳ್ತಕ್ಕಿ ಗಂಜಿ. ನೀರುಳ್ಳಿ ಗಂಜಿ. ಮಕ್ಕಳ ಗಂಜಿ. ಪಾಯ್ಸ. ಹಪ್ಪಳ. ಮಂತುಳಿ ತುಪ್ಪ. ಸಾಂತಣೆ. ಮಾಂಬಳ. ಮೊಜ್ಜಿಗೆ ಮೆಣ್ಸ್ ಇತ್ಯಾದಿ. ಈ ತಿಂಡಿಗಳ ಪಟ್ಟಿಲಿ ಇಂದ್ ಸುಮಾರ್ ತಿಂಡಿಗ ಕಾಣೆನೇ ಆಗಿಬುಟ್ಟೊಳೊ.

ನಮ್ಮ ಹಳೆ ಕಾಲದ ತಿಂಡಿಗ ಕಾಣೆ ಆದ್ದರ ಒಟ್ಟಿಗೆನೆ ಇಂದ್ ನಮ್ಮಲ್ಲಿ ಹೊರನಾಡ್‌ನ. ಹೊರ ದೇಶದ ತಿಂಡಿಗ ಎಲ್ಲ ಜಾಗೆ ಮಾಡಿಕಂಡೊಳೊ. ಕೇಕ್. ಮೈಸೂರು ಪಾಕ್. ರಸಗುಲ್ಲ. ಜಾಮೂನ್. ನೂಡ್‌ಲ್ಸ್ ಇಂತದ್ದೆಲ್ಲ ತಿಂಡಿಗ ರಾಜರಾಂಗೆ ನಮ್ಮ ಮನೆ ಮನೆಗಳ್ಲಿ ಮೆರೆತಾ ಒಳೊ.

4. **'ವೇಷ–ಭೂಷಣ'ಗಳ ವಿಸಯಲಿ ಆಗಿರುವ ಪಲ್ಲಟ:** ಒಂದು ಕಾಲ ಇತ್ತ್. ಗಂಡ್‌ಗಳಿಗೆ ಹಗಲ್ ಕೆಲ್ಸದ ಸಮಯಲಿ ಬೊರಿ ಕೋಮಣ ಮಾತ್ರ. ಇದ್ದರೆ ತಲೆಗೊಂದು ಮುಂಡಾಸ್. ಹೆಣ್ಣುಗಳಿಗೆ ಒಂದು ಸೀರೆನ ಅಡ್ಡ ತುಂಡುನೂ. ಎದೆಗೆ ಒಂದು ರೌಕೆನೂ. ಆಗ 'ಡ್ರೆಸ್' ತೇಳ್ರೆ ಅಷ್ಟೆ. ಎಲ್ಯಾರ್ ಜಂಬರಕ್ಕೆನೋ. ದೂರದೂರಿಗೆನೋ ಹೋಕನ ಮಾತ್ರ ಹಣ ಒಳ್ಳೊಳ್ಳೆ ಬಟ್ಟೆಗಳ ಹಾಕೊಂತಿದ್ದ ನಮ್ಮ ಜನಂಗ. 'ಒಳ್ಳೊಳ್ಳೆ ಬಟ್ಟೆ' ತೇಳ್ರೆ ಗಂಡ್‌ಗಳಿಗೆ ಬಿಳಿ ಮುಂಡು. ಬಿಳಿ ಅಂಗಿ. ಹೆಣ್ಣುಗಳಿಗೆ ಸಣ್ಣವ್ಕೆ ಆದರೆ ಲಂಗನೂ ರೌಕೆನೂ. ದೊಡ್ಡವ್ಕೆ ಆದರೆ ಸೀರೆನೂ ರೌಕೆನೂ. ಹೆಣ್ಣುಗಳಿಗೆ ಹೂ ತೇಳ್ರೆ ಆಗನ ಕಾಲಲಿ ಮನೆನ ಹಿತ್ಲಲಿ ಆಗ್ತಿದ್ದ ದಾಸವಾಳ. ಚೆಂಡು ಹೂ. ಮಲ್ಲಿಗೆ. ಸಂಪಿಗೆ. ಕಾಡ್‌ಲಿ ಸಿಗ್ತಿದ ಕೇದಗೆ ಹಿಂಗೆ.

ಈಗ ಹಾಂಗೆಲ್ಲ. 'ಡ್ರೆಸ್' ತೇಳ್ರೆ ಅದ್ ನಾನಾ ನಮೂನೆದ್ದ್. ಫ್ಯಾಶನ್ ಡಿಸೈನ್‌ನವ್ರು ಹೆಂಗ ವಿನ್ಯಾಸ ಮಾಡಿಕೊಟ್ರುನುಸಾನು ಅದರ ಮುಲಾಜಿಲ್ಲದೆ ಹಾಕಂಕೆ ಜನಂಗ ತಯಾರ್ ಒಳೊ. ಹಂಗನೇ ಈಗ ಹೂ ತೇಳ್ರೆ ಬೊರಿ ಪೇಟೆನ ಹೂಗ ಮಾತ್ರ. ನಮ್ಮ ಹಿತ್ಲಲಿ ಆದ ಹೂನ ಮುಡ್ಡರೆ ಮೊರ್ಯಾದಿಗೆ ಕಮ್ಮಿ ತೇಳಿ ಗ್ರೈಸುವ್ರುನೂ ಒಳೊ ನಮ್ಮಲ್ಲಿ.

**ಮುಂದೆ ಹೇಂಗೆ?:** ನಮ್ಮ ಸಂಸ್ಕೃತಿ–ಸಂವಹನ ಮುಂದೆಗೆ ಹೇಂಗೆ ನಿತ್ತ್‌ಬುಡ್ತು ತೇಳ್ಳೊದರ ಬಗೆಲಿ ಕಲ್ಪನೆ ಮಾಡಿಕನನೆ ಮೈ ಜುಂ ತೇಳ್ದೆ. ನಾವು ಈಗ 'ಡೈನೋಸಾರ್' ತೇಳುವ ಪ್ರಾಣಿನ ಬಗ್ಗೆ ಹೇಂಗೆ ಬೊರಿ ಚಿತ್ರಲಿ ಅಲ್ಲಾರೆ ಕಾರ್ಟೂನ್‌ಲಿ ಮಾತ್ರ ನೋಡ್ತಾ ಒಳೊನೊ ಹಂಗನೇ ನಮ್ಮ ಮಕ್ಕಳ ಕಾಲಕ್ಕೆ ಆಕನ ನಮ್ಮ ಈಗನ ಸಂಸ್ಕೃತಿಗಳ ಬೊರಿ ಚಿತ್ರಲಿಯೋ. ಕತೆಗಳ್ಲಿಯೋ ಮಾತ್ರವೇ ಹೇಳಕಾದು. ಹಂಗಾಕೆ ಬೊತ್ತು. ಬೇಡಾಂತಿದ್ದರೆ ನಾವು ನೀವೆಲ್ಲ ಸೇರಿಕಂಡ್ ನಮ್ಮ ಸಂಸ್ಕೃತಿನ ಬಾರಿ ಪ್ರೀತಿ ಗೌರವಲಿ ಆಚರಣೆಗ ತರೊಕು. ಹೋದಲೆಲ್ಲ ಅದರ ಬಗೆಲಿ ಹೆಮ್ಮೆಲಿ ಹೇಳಿಕಂಕು. ನಮ್ಮ ನಮ್ಮ ಮನೆಗಳ್ಲಿ ಅದರೆಲ್ಲ ನಾವು ಆಚರಣೆ ಮಾಡಿ ತೋರ್ಸ್ಲಿ ಮಕ್ಕಳಿಗೆ ಹೇಳಿಕೊಡೊಕು. ಹಂಗಾದರೆ ಮಾತ್ರ ನಾವು ಅದರ ನಮ್ಮ ಮಕ್ಕಳ ಮೂಲಕ ಮುಂದೆನ ತಲೆಮಾರ್‌ಗಳಿಗೆ ದಾಟ್ಸಕೆ ಸಾಧ್ಯ ಉಟ್ಟು ತೇಳಿ ನನ್ನ ಭಾವನೆ. ಇಂತ ಕೆಲ್ಸ ನಮ್ಮ ಮನೆ ಮನೆಗಳ್ಲಿ ಮೊದ್ಲಲಿ ಆಗುವಂಗಾಕೆ ನಮ್ಮ ಇಂದ್‌ನ ಈ ಸಮ್ಮೇಳನ ಒಳ್ಳೆ ಒಂದು ಇಂಬುನ ನಾವೆಲ್ಲರ್ವ್ಕುನು ಕೊಡಲಿ ತೇಳಿ ನಾ ದೇವ್ರೊಟ್ಟಿಗೆ ಬೇಡಿಕಣೆ.

ಇನ್ನೂ ಸುಮಾರ್ ವಿಸಯಗಳ್ಲಿ ಆಗಿರುವ ಪಲ್ಲಟಗಳ ಬಗೆಲಿ ಮಾತಾಡಿಕೆ ಸಾಧ್ಯತೆ ಉಟ್ಟು. ಇಲ್ಲಿ ನಾ ಎಲ್ಲ ವಿಸಯಗಳ ಪ್ರಸ್ತಾಪನೂ ಮಾಡ್ಲೆ. ಪ್ರಸ್ತಾಪ ಮಾಡ್ದ ವಿಸಯಗಳ್ನೂ ಪೂರ ಹೇಳ್ಲೆ. ಆದರು ಸಮಯದ ಕೊರತೆ ಇರ್ದಂದಾಗಿ ಇಷ್ಟಕ್ಕೆ ನನ್ನ ವಿಚಾರಗಳ ನಿಲ್ಸಿನೆ. ನಮಸ್ಕಾರ. ❑

ಹೇಳಿಕಂಡ್ ಕುದ್ವರೆ. ಅವ್ವ ಹುಳ್ನೀರ್ ಒಟ್ಟಿಗೆ ಸೊಪ್ಪು ಬೂದಿನೂ ಇಲ್ಲರೆ ಹಸಿ ಸುಣ್ಣ ಹಾಕಿ ಕಲ್ಸಿ ನಮ್ಮ ದೂಂಪೆಗೂ ಹಗೆ ಬರಿಗೂ ಉಜ್ಜುತ್ತಿತ್ತ್. ಅದ್ ಒಣಗಿಕಂಡ್ ಬಾಕನ ಅದ್ ಹಕ್ಕಳೆ ಹಕ್ಕಳೆ ಎದ್ದದೆ. ನಾವು ಅದನ್ನ ಸೂರೇ ಚೂರೇ ತಿಂದ ಮುಗುಸ್ತಿದ್ದೊ. ಅದ್ ಒಂತರಾ ಉಪ್ಪುಪ್ಪು. ಹುಳ್ಳಂಗೆ ಆಕಂಡ್ ತಿಂಬಕೆ ಬಾರೀ ಕುಸಿ ಆಗ್ತಿತ್ತ್. ಆದರ್ಲೂ ನಮ್ಮ ದೊಂಡೆ ಬೇನೆ ಕಮ್ಮಿ ಆತ್ಲೆ ಹೇಳಿ ನಾವು ಕುಂಯಿ ಕುಂಯಿ ಹೇಳಿರೆ ಅವ್ವ ಆಚೆಮನೆ ಬೋಜಪ್ಪನೊಟ್ಟಿಗೆ ಹೋಗಿ. ಇವಳ ದೊಂಡೇಲಿ ಗಲಳೆ ಎದ್ದಿರೋಕು. ಸಡೆ ಕಾವು ಬಿಸಿ ಮಾಡಿ ಗಂಟ್ಲ್ ಒಳಗೆ ಇಸಿ ಗಲಳೆ ಒತ್ತಿಯಾನಿ ಅಂತ ಹೇಳ್ತಿದ್ದೊ. ಒಮ್ಮೆ ಹಂಗೆ ಬೋಜಪ್ಪ ಅನ್ನದ ಮಡ್ಕೆಯೊಳಗೆ ಸಡೆ ಕಾವು ಬಿಸಿ ಮಾಡಿ ಗಂಟ್ಲೊಳಗೆ ಹಾಕಿ ಅದನ್ನ ಒತ್ತಿದ್. ನಾ ಬೇನೆಲಿ, ಅದಕ್ಕಿಂತ ಜಾಸ್ತಿ ಹೆದ್ರಿ ಮರ್ಟದ್ ಇನ್ನೂ ನಾ ಮರ್ತಿತ್ಲೆ. ಹಂಗಾಗಿ ಗಂಟ್ಲ್ ಬೇನೆ ಹೇಳಿ ಅಲ್ಲಿವರೆಗೆ ನಾ ಹೋಕೆ ಬುಡ್ತಿತ್ಲೆ. ನಮ್ಮ ಹಳ್ಳಿಗಳ್ಲಿ ಒಬ್ಬಬ್ರು ಒಂದೊಂದು ಮದ್ದ್ ಕೊಡುದರ್ಲಿ ಉಸಾರ್. ಅದ್ ಮೂಢ ನಂಬಿಕೆನೋ ಎಂತದೋ ಗೊತ್ತ್ಲೆ. ಕೆಲವು ಕಾಲು ಉಳ್ಕಿರೆ ಮೊದ್ದು ಕೊಟ್ಟರೆ, ಇನ್ನ್ ಕೆಲವು ಮಕ್ಕಳಾಗದವ್ಕೆ, ಇನ್ನ್ ಕೆಲವು ಕಜ್ಜಿ ಎದ್ದರೆ ನೀರ್ ಮಂತ್ರಿಸಿ ಹೊಯ್ಯಕ್ಕೆ ಇಂತವೆಲ್ಲಾ ಸುಮಾರ್ ಒಳ. ಆದರೆ ಕಾಕತಾಳಿಯಾನೋ ನಂಬಿಕೆನೋ ಒಂದು ಗೊತ್ತ್ಲೆ. ಹೆಚ್ಚಿನಂಸ ಗುಣ ಆಗಿ ಬುಡ್ತಿದ್ದದ್ ಸತ್ಯ.

ನಂಗೆ ಸಾಲೆಗೆ ಹೋತಿರ್ಕನ ಲೆಕ್ಕ ಹೇಳಿರೆ ಬಾರಿ ಕಸ್ಟ. ನಾಳೆ ಲೆಕ್ಕದ ಪರೀಕ್ಷೆ ಹೇಳಿರೆ ಇಂದೇ ನಂಗೆ ಹೊಟ್ಟೆ ಬೇನೆ ಸುರು ಆತಿತ್ತ್. ಹೊತಾರೆಗೆ ಎದ್ದಂಡ್ ಅವ್ವ ನಂಗೆ ಹೊಟ್ಟೆ ಕಚ್ಚಿದೆ ಎಂತ ಮಾಡುದು ಮರ್ದಿಕೆ ಸುರು ಮಾಡ್ತಿದ್ದೆ. ಸಾಯಲಿ ಬುಡು. ಸಾಲೆಗೆ ಇಂದ್ ರಜೆ ಮಾಡ್ ಹೇಳಿ ಮನೆ ಹಿಂದೆಂದ ಗಾಳಿ ಸೊಪ್ಪು ತಂದ್ ಅದರ್ನ ಬಾಯ್ಲಿ ತೊಳ್ಸು, ಅರ್ದ್. ಎರಡ್ ಕಲ್ಲ್ ಉಪ್ಪಾಕಿ ಕುಪ್ಪಿ ಬಟ್ಲ್‌ಲಿ ಹೊಯ್ದ್ ಕುಡಿಯಕೆ ಕೊಡ್ತಿತ್ತ್. ರಾಮ ಸಿವನೇ ಅದರ್ನ ಕುಡಿವ ಕಸ್ಟ ಯಾರಿಗೆ ಹೇಳುದು? ಅದ್ ಕೈ ಪಿಸ. ಹಂಗೆ ಹೇಳಿ ಆಚೆ ಈಚೆ ಹೋಗಿ ಕದ್ದ್ ಚೆಲ್ಲುವಾಂಗೆ ಇಲ್ಲೆ. ಅವ್ವನ ಎದುರ್ಲೇ ಕುಡಿಯೋಕು. ಕುಡಿಯಕೆ ಹಿಂದೆ ಮುಂದೆ ನೋಡಿರೆ ಸಾಲೆಗೆ ಕಳ್ಳ ಕಾಟ ಕಳ್ಳ ಹೊಟ್ಟೆ ಬೇನೆಗೆ ಇದೇ ಮೊದ್ದು ಅಂತ ಕುಡ್ಸದೆ ಬುಡ್ತಿತ್ಲೆ. ಆದರೆ ಇವೆಲ್ಲಾ ಹಳ್ಳಿ ಮೊದ್ದು ಆದ ಕಾರಣ ಸುಮ್ಮ ಸುಮ್ಮಗೆ ಕುಡ್ಸದರೆ ಏನೂ ಆಕಿಲ್ಲೆಣೇಳುದು ಗೊತ್ತಿತ್ತು.

ಇನ್ನು ಮಳೆಗಾಲ ಸಾಲೆಗೆ ಹೋಗಿ ಬಾಕನ ಗದ್ದೆ ಕೆಸ್ರಿ ನಡ್ದ್ ಕಾಲ್ ಬೆರ್ಳೊಳಗೆ ಹುಣ್ಣು ಆಗಿ ಅದರ ತೊರ್ಸುವ ಪಾಡ್ ಯಾರಿಗೆ ಹೇಳ್ದು? ಅವ್ವಂದ್ ಅದಿಕ್ಕೆ ಒಂದೇ ಮದ್ದ್, ಕೈ ಕಾಲ್ ಮನಾರ ತೊಳಿಯಕೆ ಹೇಳಿ. ಒಲೆ ಕಟ್ಟೆ ಬಿಸಿಗೆ ಬಟ್ಟೆ ಇಸಿ ಬೆಚ್ಚ ಮಾಡಿ. ಬೆರ್ಳ ಸಂದಿಗೆ ಇಸಿ ಒಣ್ಗಿಸಿ ಮತ್ತೆ ಅದಿಕೆ ಬೆಸಗೆ ಕರಿನ ತುಂಬಿಸಿ ಇಡ್ತಿತ್ತ್. ಮಾರ್ನೆ ದಿನಕೆ ತುರ್ಸಾಟ ಮಾಯ ಆಗ್ತಿತ್ತ್. ಮತ್ತೆ ಪುನ: ಸುರು ಆದರೆ ಇದುವೇ ಮೊದ್ದು. ನಮ್ಮ ಅವ್ವ ಸೊಂಟ ಬೇನೆಗೆ ಒಂದು ಮೊದ್ದು ಮಾಡ್ತಿತ್ತ್. ಅದರ್ನ ನೋಡಿರೆ ನಂಗೆ ಮ್ಯಾಜಿಕ್‌ನ ಹಂಗೆ ಆಸ್ತಿತ್ತು. ಅವ್ವಂಗೆ ಸೊಂಟ ಬೇನೆ ಆದರೆ ಅವ್ವನ ಕೆಲ್ಸ ಎಲ್ಲಾ ಮುಗ್ದ ಮೇಲೆ. ಅದಿಕ್ಕೆ ಬೇಕಾದ ವ್ಯವಸ್ತೆ ಮಾಡಿಕಂಡ್ ಕವುಚಿ ಮಲ್ಗ್‌ತಿತ್ತು. ಆಗ ಅವ್ವನ ಸೊಂಟದ ಮೇಲೆ ಅಂದರೆ ಬೆನ್ನ್ ಕೆಳಗೆ ಮಣ್ಣಿನ ದೀಪ ಹೊತ್ತಿಸಿ. ಅದರ ಮೇಲೆ ಕುಪ್ಪಿ ಗ್ಲಾಸ್ ಮುಚ್ಚಿಕೆ ಹೇಳ್ತಿತ್ತ್. ಗ್ಲಾಸೊಳಗೆ ಗಾಳಿ ಇರುವಸ್ಟ್ ಹೊತ್ತು ದೀಪ ಹೊತ್ತುತಿತ್ತು. ಮತ್ತೆ ಕಡೀಕಾಕನ ಗ್ಲಾಸ್ ಒಳಗೆಂದ ಸೊಂಟದ ಮಾಸ ಉಬ್ಬಿ ಬರ್ತಿತ್ತ್. ಅದರ್ನ ನೋಡಿಕೆ ಬಾರಿ ಹೆದರಿಕೆ ಆತಿತ್ತ್. ಮತ್ತೆ ಮೆಲ್ಲ ಗ್ಲಾಸ್ ತೆಗಿಯೋಕು. ಅವ್ವ ಈ ಮೊದ್ದುನ ಬೇರೆಯವ್ಕೆ ಮಾಡ್ತಿತ್ತ್, ಆದರೆ ಅವ್ವಂಗೆ ಮಾಡಿಕೆ ನಮ್ಮೊಟ್ಟಿಗೆ ಹೇಳ್ತಿತ್ತ್. ಅಷ್ಟ್ ಮಾತ್ರ ಸೊಂಟ ಬೇನೆ ಗಂಟ್ ಬೇನೆ ಒಂದೂ ಇರ್ದುಲೆ ಗಡ. ಇಂತ ಎಷ್ಟೋ ಮೊದ್ದುಗ ಅವ್ವನ ಅನುಭದ ಚೀಲದೊಳಗೆ ಉಟ್ಟು.

ಈಗ ನಂಗೆ ಕೆಸ್ರಿಗೆ ಹೋಕೆ ಇಲ್ಲರೆನೂ ಸ್ವಲ್ಪ ನೀರು ಪಸೆ ಮುಟ್ಟರೂ ಬೆರಳೊಳಗೆ ತೊರ್ಸಿಕೆ ಸುರು ಆದೆ. ಎಸ್ಟೋ ಮುಲಾಮು ಉಜ್ಜಿ ಆತ್ , ಸೊಲ್ಪನೂ ಗುಣ ಆದುಲೆ. ತೊರ್ಸುದೂ ಕಡಿಮೆ ಆಲೆ. ಬೆಸಗೆನ ಕರಿ ಹಾಕೊನಾ ಹೇಳಿರೆ. ಸೌದೆ ಒಲೆನೇ ಇಲ್ಲೆ. ಅವ್ವನ ಬೆಸಗೆನ ಕರಿಲಿ ಅಷ್ಟೆಲ್ಲಾ ಮೊದ್ದುನ ಗುಣ ಇತ್ತಾ? ನಂಬಿಕೆ ಆಲೆ. ಆದರೆ ನಂಬಕಾದ ಸತ್ಯ ಕೂಡ ಇದ್. ಅವ್ವ–ಅವ್ವನೊಟ್ಟಿಗೆ ಇದ್ದ ಪರಿಸರ ಎಲ್ಲದರ್ಲೂ ಮೊದ್ದುನ ಗುಣ ಇತ್ತ್. ಅವ್ವನ ಕೈ ಬೆರ್ಳಿಗೆ ಒಂದು ದಿವ್ಯ ಶಕ್ತಿ ಇತ್ತ್. ಎಂತ ಅರ್ದು ಹಾಕಿರೂ ಗುಣ ಆಗಿ ಬಿಡ್ತಿತ್ತು. ನಮ್ಮ ಚಾಮಿಯವ್ವ ಮಾತ್ರ ಅಲ್ಲ, ಎಲ್ಲರ ಮನೆಯ ಚಾಮಿಯವ್ವಗ ಕೂಡ ವಿಶೇಸ ಶಕ್ತಿಗ. ಚಾಮಿಯವ್ವಂದಿರ ಕೈ ಬೆರ್ಳ ನಮ್ಮೆಲ್ಲರ ಮೇಲೆ ಸೋಕಲಿ. ಜಗದ ಬೇನೆ ಬೇಗ ಮಾಯಲಿ. ❑

ಇದ್ದಿದ್ದರ್ ಅಂತ ಗೊತ್ತಾದೆ. ಊರುದ ಜನಂಗ ಜೊತೆ ಸೇರಿರೆ ಎಂತ ಸವಾಲ್ ಕೂಡ ಸಲೀಸಾ ಇದೆ ಎಂಬಂಗೆ ಎರಡನೇ ಸಾಹಿತ್ಯ ಸಮ್ಮೇಳನ ಆಯೋಜನೆ ಆಗಿತ್ತ್. ಇದ್ಕೆ ನಿಜಕ್ಕೂ ಅಕಾಡೆಮಿ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆ ಅಭಿನಂದನಾರ್ಹ. ಹಂಗನೆ ಆಲೂರು ಸಿದ್ದಾಪುರದ ಎಲ್ಲ ಮನೆವು ಕೂಡ ಸೇರಿಕಂಡ್ ಇದೊಂದು ನಮ್ಮ ಮನೆ ಕೆಲ್ಸದ ತರ ಜಂಬರ ನಡ್ಸಿದ್ದೊ. ಅವರ ಕೆಲ್ಸಕ್ಕೆ ಎಷ್ಟ್ ಅಭಿನಂದನೆ ಹೇಳ್ರು ಕಮ್ಮಿನೆ.

ಹಂಗಿದ್ದರೂ ನಂಗೆ ಅರೆಬಾಸೆ ಸಾಹಿತ್ಯ ಸಮ್ಮೇಳನ ವಿಚಾರಲಿ ಒಂದ್ ಅಭಿಪ್ರಾಯ ಉಟ್ಟು. ಇದ್ ಬರೀ ಸಮ್ಮೇಳನ ಮಾತ್ರ ಅಲ್ಲ. ಅಕಾಡೆಮಿಗೂ ಸಂಬಂಧಿಸಿದ್. ಅರೆಬಾಸೆ ಅಕಾಡೆಮಿನ ಬರಿ ಹತ್ತ್ ಕುಟುಂಬ, ಹದಿನೆಂಟ್ ಗೋತ್ರದವ್ಕೆ ಮಾತ್ರ ಸೀಮಿತಗೊಳ್ಸುದು ಯಾಕೆಂತ ಅರ್ಥ ಆದುಲೆ. ಇಂದ್ ಸುಳ್ಯಲಿ ಅರೆಬಾಸೆನ ಗೌಡ್ರುಗ ಮಾತ್ರ ಮಾತಾಡುದು ಅಲ್ಲ. ವ್ಯಾವಹಾರಿಕ ಭಾಷೆ ಆಗಿ ಕೂಡ ಅರೆಬಾಸೆ ಬಳಕೆ ಆದೆ. ಹಂಗಿರಿಕನ ಅಕಾಡೆಮಿ ಮತ್ತ್ ಸಮ್ಮೇಳನಲಿ ಅರೆಬಾಸೆ ಮಾತಾಡುವ ಎಲ್ಲವೂ ಒಳಗೊಳ್ಳೊಕು. ಇದ್ ಬರೀ ಗೌಡ್ರುಗಳ ಬಾಸೆ ಅಂತ ಉಳ್ದವ್ರು ಈ ಬಾಸೆಲಿ ಮಾತಾಡಿಕೆ ಇಷ್ಟ ಪಡದಂಗೆ ಮಾಡಿಕೆ ಆಗದ್. ಅಂದರೆ ಅರೆಬಾಸೆ ಮಾತಾಡುವವು ಈ ಅಕಾಡೆಮಿಲಿ ಸದಸ್ಯರ್ ಕೂಡ ಆಗಿ ಬರೊಕು. ಸರ್ಕಾರ ಅರೆಬಾಸೆ ಗೊತ್ತಿರುವ ಬೇರೆ ಜಾತಿನವರನೂ ಅಕಾಡೆಮಿಗೆ ಸದಸ್ಯರಾಗಿ ನೇಮಕ ಮಾಡಿಕನ, ಅವರ ಮೇಲೆ ಒತ್ತಡ ತಂದು ಸದಸ್ಯ ಸ್ಥಾನಕ್ಕೆ ರಾಜೀನಾಮೆ ಕೊಡ್ಸಿರುವ ಉದಾಹರಣೆ ಉಟ್ಟು. ಇದ್ ಸರಿಯಲ್ಲ. ಬರೀ ಹತ್ತ್ ಕುಟುಂಬ ಹದಿನೆಂಟ್ ಗೋತ್ರದವ್ ಮಾತ್ರ ಅಕಾಡೆಮಿಲಿ ಇರೊಕು ಅಂತ ಬಯಸಿರೆ ಅದ್ ಬಾಸೆ ಬೆಳವ ದಾರಿಲಿ ಮುಳ್ಳಾಗುವ ಸಾಧ್ಯತೆ ಉಟ್ಟು. ಬಾಸೆ ಉಳ್ಸುದು ಮಾತ್ರ ಅಲ್ಲ ಅದ್ ನಮ್ಮ ಸುತ್ತ ಇರುವ ಪರಿಸರದ ಎಲ್ಲರನೂ ಒಳಗೊಳ್ಳೊಕು ಅಂತ ನಾವ್ ಯೋಚಿಸಿರೆ, ತಾನೇ ತಾನಾಗಿ ಬಾಸೆ ಬೆಳ್ದದೆ. ಅದು ಬುಟ್ಟು, ಈ ಅಕಾಡೆಮಿ ಇರುದೇ ನಾವ್ಗೆ, ಹಿಂಗಾಗಿ ನಮ್ಮ ಅರೆಬಾಸೆ ಗೌಡ್ರುಗ ಬುಟ್ಟ್ ಬೇರೆ ಯಾರೂ ಸದಸ್ಯರ್ ಆಕೆ ಆಗದ್ ಎಂಬ ಯೋಚನೆನ ಇನ್ನಾದ್ರೂ ಬುಡೊಕು. ಹಂಗೇನೇ ಅರೆಬಾಸೆ ಸಾಹಿತ್ಯ ಸಮ್ಮೇಳನಲಿನೂ ಅದಷ್ಟ್ ಮನೆಭಾಷೆಯಾಗಿ ಅಲ್ಲದಿದ್ದರೂ ಪರಿಸರದ ಭಾಷೆಯಾಗಿ ಕಲ್ತಿರುವ ಬೇರೆ ಬೇರೆ ಜನರ ಕರೆಸಿ ಮಾತಾಡ್ಸೊಕು. ಸುಳ್ಯ, ಮಡಿಕೇರಿ ಪರಿಸರಲಿ ಇರುವ ಸಂಪನ್ಮೂಲ ವ್ಯಕ್ತಿಗಳು ಕೂಡ ಇಂತಹ ಸಾಹಿತ್ಯ ಸಮ್ಮೇಳನಲಿ ಭಾಗಿಯಾಗಿ ಮಾತಾಡಿರೆ, ಅರೆಬಾಸಿಕರ 'ಭಾಷಾ ಪ್ರಜ್ಞೆ' ಬೆಳೆಸುವ ದೃಷ್ಟಿಲೂ ಸಹಾಯ ಆದೆ.

ಈಗಿನ ಅಧ್ಯಕ್ಷರ್ ಕಜೆಗದ್ದೆ, ಅಕಾಡೆಮಿಲಿ ಹಲವು ಚಟುವಟಿಕೆಗಳ ಶುರು ಮಾಡ್ಯೊಳೊ. ಅದಕ್ಕೆಲ್ಲಾ ಯಶಸ್ಸ್ ಸಿಕ್ಕಲಿ. ಅರೆಬಾಸೆ ಅಂತ ಹೇಳ್ರೆ ಸುಳ್ಯ ಮತ್ತು ಕೊಡಗ್ನ ಗೌಡ್ರುಗಳ ಮನೆಬಾಸೆ ಅಷ್ಟೆ ಅಲ್ಲದೆ ಗೌರವ ಅಂತ ಹೇಳ್ದು ನಿಜ. ಹಂಗೇನೇ ಅದ್ ಇಡೀ ಪರಿಸರದ ಬಾಸೆ ಆಗುವಂಗೆ ಮಾಡಕಾದ್ ಎಲ್ಲರ ಜವಾಬ್ದಾರಿ. ❑

## ಹನಿಗವನ

### ನಮ್ಮ ಹೈದಗ

ಹೈದಗ ಬುಟ್‌ಕಂಡೊಳೊ ಹಿಪ್ಪಿ
ಕೈಯಲ್ಲಿ ಹಿಡ್ಕೊಂಡೆಳೊ ಕುಪ್ಪಿ
ಕಾಫಿ ತೋಟದ ದಾರಿನಂಗೆ ಗೆರೆ
ಎಲ್ಲರ ತಲೆಲಿ ಕೆನ್ನೆಲಿ ಸಣ್ಣಬರೆ

–ಶಾಲಿನಿ ನಿತ್ಯ ಅಯ್ಯೇಟಿರ
ಯಲಹಂಕ, ಬೆಂಗಳೂರು

# ಜಾಗತೀಕರಣ: ಅರೆಭಾಷೆಯ ಸಾಧ್ಯತೆ ಮತ್ತು ಸವಾಲು

**– ಲೋಕೇಶ ಕುಂಚಡ್ಕ**
ಸಂಶೋಧನ ವಿದ್ಯಾರ್ಥಿ
ಎಸ್.ವಿ.ಪಿ. ಕನ್ನಡ ಅಧ್ಯಯನ ಸಂಸ್ಥೆ,
ಮಂಗಳೂರು ವಿಶ್ವವಿದ್ಯಾನಿಲಯ.

ಜಾಗತೀಕರಣವು ಎಲ್ಲೆಡೆ ತೀವ್ರವಾಗಿ ಹರಡುತ್ತಿರುವ. ಈ ಸಂದರ್ಭದಲ್ಲಿ ಜಾಗತೀಕರಣದ ಹಿನ್ನೆಲೆಯಲ್ಲಿ ಅರೆಭಾಷೆಗೆ ಉಳಿವಿನ ಸಮಸ್ಯೆ ಒಂದು ಕಡೆಯಾದರೆ, LPGಯಿಂದಾಗಿ ಸಾಕಷ್ಟು ತೀವ್ರಗತಿಯ ಬದಲಾವಣೆಗಳು ಆಗಿದ್ದು. ಇಂತಹ ಬದಲಾವಣೆಗೆ ಅರೆಭಾಷೆಯು ಹೊರತಾಗಿಲ್ಲ. ಅರೆಭಾಷೆ ಸೇರಿದಂತೆ ತುಳು, ಕೊಡವ, ಕುಂದಗನ್ನಡ, ಹವಿಗನ್ನಡ, ಕೊರಗ ಇತ್ಯಾದಿ ಭಾಷೆಗಳಿಗೆ ಉಳಿವಿನ ಸವಾಲು ಎದುರಿಸುತ್ತಿವೆ.

ಆಧುನಿಕ ಜಗತ್ತಿನ ವಿಜ್ಞಾನ ಶಿಸ್ತುಗಳು, ಗಣಕಯಂತ್ರ, ಅಂತರ್ಜಾಲ, ವಿದೇಶಿ ಸಂಪರ್ಕಗಳು ಸಾಕಷ್ಟು ಅವಕಾಶಗಳನ್ನು ಕಲ್ಪಿಸಿದೆ. ಕೆಲವರಿಗೆ ಕನ್ನಡದಲ್ಲಿ ಬರೆದರೆ ಶಾಶ್ವತತೆ ಇರುತ್ತದೆ ಎನ್ನುವ ಅಭಿಪ್ರಾಯದ ಹಿನ್ನೆಲೆಯಲ್ಲಿ ತಮ್ಮ ಬರಹಗಳನ್ನು ಕನ್ನಡದಲ್ಲಿ ಬರೆಯಲು ಇಚ್ಛಿಸುತ್ತಾರೆ. ಆಧುನಿಕರಣದಿಂದ ಸಾಮಾನ್ಯರಲ್ಲಿ ತಮ್ಮ ಮಾತೃಭಾಷೆಯ ಬಗ್ಗೆ ಕೀಳರಿಮೆ ಹೇಳತೀರದು. ತಮ್ಮ ಮಕ್ಕಳ ಜೊತೆಗೆ ಇಂಗ್ಲಿಷ್, ಕನ್ನಡದಲ್ಲಿ ಮಾತಾಡಲು ಇಷ್ಟಪಡುತ್ತಾರೆ. ಅದು ಗೌರವ ಎಂದು ಭಾವಿಸುತ್ತಾರೆ. ಸಾಮಾನ್ಯರಿಗೆ ಸ್ವಭಾಷಾ ತಾತ್ಸಾರ ಹಾಗೂ ಅನ್ಯಭಾಷಾ ವ್ಯಾಮೋಹ ತೀವ್ರವಾಗಿ ಹೆಚ್ಚಾಗಿದೆ. ಹಾಗಾದರೆ ಅರೆಭಾಷೆಯ ಭವಿಷ್ಯ ಏನು? ಜಾಗತೀಕರಣ ಪ್ರಭಾವದಿಂದ ಯಾವ ರಾಷ್ಟ್ರವು ಹೊರತಾಗಿಲ್ಲ. ದೇಶದ ಪ್ರಗತಿಯ ದೃಷ್ಟಿಯಿಂದ ಒಳ್ಳೆಯದು. ಆದರೆ ದೇಶಿಯತೆಯನ್ನು ಮರೆತಿವೆ. ಇದಕ್ಕೆ ಅರೆಭಾಷಿಗರು ಹೊರತಾಗಿಲ್ಲ. ಜಾಗತೀಕರಣದಲ್ಲಿ ಲಾಭವೆ ಮುಖ್ಯ ಉದ್ದೇಶವಾಗಿರುವುದರಿಂದ ಇತರ ಭಾಷೆಗಳ ಮಾಧ್ಯಮಗಳು ಹೆಚ್ಚಾಗಿವೆ? ಆ ಸ್ಥಾನ ಅರೆಭಾಷೆಗೂ ಸಿಗಬೇಕಲ್ಲ? ಜಾಗತೀಕರಣದ ಸಂದರ್ಭದಲ್ಲಿ ಸೃಜನಶೀಲ(ಪುಸ್ತಕ) ಓದುಗರ ಸಂಖ್ಯೆ ಕಡಿಮೆ ಇದೆ. ಆದರೆ ಅಂತರ್ಜಾಲ ಓದುಗರು ಇದ್ದಾರೆ(ವಾಟ್ಸಪ್, ಪೇಸ್ಬುಕ್).

ಆಧುನಿಕ ಯುಗದಲ್ಲಿ ಆಳುವ ಭಾಷೆ, ಆಳಿಸಿಕೊಳ್ಳುವ ಭಾಷೆ ಎಂಬ ವರ್ಗೀಕರಣವಿದ್ದು, ಆಯಾ ಭಾಷೆಗಳು, ಆಳಿಸಿಕೊಳ್ಳುತ್ತವೆ ಕೆಲವು ಭಾಷೆಗಳು ಆಳುತ್ತವೆ. ಜಾಗತೀಕರಣದ ಹಿನ್ನೆಲೆಯಲ್ಲಿ ಅನ್ಯಭಾಷೆಗಳ ಕೆಲವು ಅಗತ್ಯತೆ ಇದ್ದರೂ, ತಾಯ್ನುಡಿ (ಅರೆಭಾಷೆ)ಯನ್ನು ಕಡೆಗಣಿಸುವಂತಿಲ್ಲ. ಯಾವುದೇ ಭಾಷೆ ಶಾಶ್ವತವಾಗಿ ಉಳಿಯಬೇಕಾದರೆ ಆ ಭಾಷೆ ನಿರಂತರ ಬಳಕೆಯಲ್ಲಿ ಇರುವ ಮೂಲಕ ಜೀವಂತಿಕೆ ಕಾಪಾಡಿಕೊಂಡಿದೆ. ಅರೆಭಾಷೆ ಕೂಡ ನಿರಂತರ ಬಳಸಿ ಜೀವಂತ ಭಾಷೆಯಾಗಲಿ. ನಮ್ಮತನವನ್ನು ಉಳಿಸಿಕೊಂಡು ಇತರ ಭಾಷೆಗಳನ್ನು ಅಳವಡಿಸಿಕೊಳ್ಳಬೇಕು.

ತುಳು ಪರಿಸರ ಮತ್ತು ಕೊಡವ ಭಾಷೆಯನ್ನು ಮಾತಾಡುವ ಪರಿಸರದಲ್ಲಿ ಕಂಡು ಬರುವ ಭಾಷೆ ಗೌಡ ಕನ್ನಡ. ಒಂದು ಪ್ರದೇಶದ ಭಾಷೆಯಾದ ಅರೆಬಾಸೆಗೆ ಅಸ್ತಿತ್ವದ ಪ್ರಶ್ನೆ ಜಾಗತೀಕರಣ ಸಂದರ್ಭದಲ್ಲಿ, ಪ್ರಶ್ನೆಗಳನ್ನು ಹುಟ್ಟು ಹಾಕುತ್ತದೆ. ಇದನ್ನ ಕೆಲವರು "ಅರೆಭಾಷೆ", "ಅರೆಬಾಸೆ" ಎಂದು ಕೆಲವರು ಕರೆದರೆ, "ಗೌಡಕನ್ನಡ" ಎಂದು ವಿದ್ವಾಂಸರು ಗುರುತಿಸಿದ್ದಾರೆ. ಒಂದು ಪ್ರದೇಶಕ್ಕೆ ಸೀಮಿತವಾಗಿರುವ ಈ ಭಾಷೆ ಜಾಗತೀಕರಣದ ಎದುರು ನಲುಗುತ್ತಿದೆ. ಇಂತಹ ಸಂದರ್ಭದಲ್ಲಿ ಭಾಷೆ ತಲೆ ಎತ್ತಿ ನಿಲ್ಲಲು ಏನು ಮಾಡಬೇಕು ಎನ್ನುವ ಪ್ರಶ್ನೆ ಎದುರುಗೊಳ್ಳುತ್ತದೆ. ಗೌಡಕನ್ನಡ ಭಾಷೆಯು ಶಿಷ್ಟಕನ್ನಡ ಪದ್ಧತಿಯೊಂದಿಗೆ, ವ್ಯಾಕರಣದೊಂದಿಗೆ ಸಮೀಪ ವರ್ತಿಯಾಗಿ ಕಂಡುಬಂದರು, ಅನೇಕ ಬಗೆಯ ಭಿನ್ನತೆಯನ್ನು ಹೊಂದಿದೆ. ಗೌಡಕನ್ನಡ ಸಾಂಸ್ಕೃತಿಕವಾಗಿ ಅನೇಕ ಅನನ್ಯತೆಗಳನ್ನು ಹೊಂದಿದೆ. ಮೌಖಿಕವಾಗಿ ಜನಪದ ಕತೆಗಳು, ಗಾದೆಗಳು, ಒಗಟುಗಳು, ನುಡಿಕಟ್ಟುಗಳು ಇವೆ. ಇವುಗಳನ್ನು ಸಂಗ್ರಹಿಸುವ ಕೆಲಸ ಇನ್ನೂ ನಡೆದಿಲ್ಲ.

ಗೌಡಕನ್ನಡ ಸಂಶೋಧನೆಯ ಸಂದರ್ಭದಲ್ಲಿ ಡಾ. ಪುರುಷೋತ್ತಮ ಬಿಳಿಮಲೆಯವರು "ಸುಳ್ಯ ಪರಿಸರದ ಗೌಡ ಜನಾಂಗದ – ಒಂದು ಸಾಂಸ್ಕೃತಿಕ ಅಧ್ಯಯನ", ಡಾ. ವಿಶ್ವನಾಥ ಬದಿಕಾನರವರು "ಗೌಡಕನ್ನಡ ಜನಪದ ಕತೆಗಳು", ಡಾ. ಲಾವಣ್ಯರವರು "ಗೌಡಕನ್ನಡ" ಭಾಷೆಯ ಕುರಿತು ಅಧ್ಯಯನ ನಡೆಸಿದ್ದಾರೆ. ಡಾ. ಕೋಡಿ ಕುಶಾಲಪ್ಪ ಗೌಡರು "ಗೌಡ ಕನ್ನಡ" ಭಾಷೆಯ ಕುರಿತು ಸಂಶೋಧನೆಯನ್ನು ನಡೆಸಿದ್ದಾರೆ.

### ಸಾಧ್ಯತೆಗಳು

1. ಅರೆಭಾಷೆಯಲ್ಲಿ ಶಿಕ್ಷಣ

ಮಾತೃಭಾಷೆಯ ಶಿಕ್ಷಣದ ಬಗ್ಗೆ ಅನೇಕ ಶಿಕ್ಷಣ ತಜ್ಞರು ಸಾಕಷ್ಟು ಒಂದೆರಡು ಹೇಳಿದ್ದಾರೆ. ಮಾತ್ರವಲ್ಲ ಅದರ ಕುರಿತಾಗಿ ಸಾಕಷ್ಟು ಚರ್ಚೆಗಳನ್ನು ನಡೆಸಿದ್ದಾರೆ ಮಾತ್ರವಲ್ಲ ನಡೆಸುತ್ತಲೇ ಇದ್ದಾರೆ. ಪ್ರಾಥಮಿಕ ಶಿಕ್ಷಣವು ಮಾತೃಭಾಷೆಯಲ್ಲಿ ದೊರೆಯಬೇಕು. ಆದರೆ ಇದುವರೆಗೆ ಮಾತೃಭಾಷೆಯಲ್ಲಿ ಶಿಕ್ಷಣ ದೊರೆತಿಲ್ಲ. ಮಾತ್ರವಲ್ಲ ಪ್ರೌಢಶಿಕ್ಷಣ [illegible] ಅರೆಭಾಷ

2. ಸಮುದಾಯದ ಒಳಗೊಳ್ಳುವಿಕೆ

ತನ್ನ ಆಚಾರ ವಿಚಾರವನ್ನು ಜಾಗತೀಕವಾಗಿ ಪ್ರಪಂಚಕ್ಕೆ ಪರಿಚಯಿಸಲು ಸಮುದಾಯದ ಪಾಲ್ಗೊಳ್ಳುವಿಕೆ ಮುಖ್ಯವಾಗುತ್ತದೆ. ಅರೆಭಾಷೆ ಎನ್ನುವ ಭಾಷೆಯನ್ನು ಒಂದು ಪರಿಸರದಲ್ಲಿ ವಾಸಿಸುವ ಜನರು ಸಂವಹನ ಮಾಡುತ್ತಿರುವ ಭಾಷೆಯಾಗಿ ಅದು ಗುರುತಿಸಿಕೊಳ್ಳಬೇಕು. ಇತರ ಸಮುದಾಯಗಳು ಆ ಭಾಷೆಯನ್ನು ಹೆಚ್ಚು ಬಳಸುತ್ತಾ ಹೋದಂತೆ ಭಾಷೆ ತನ್ನ ನೆಲೆಯನ್ನು ವಿಸ್ತರಿಸಿಕೊಳ್ಳುತ್ತದೆ.

3. ಜಾಗತೀಕ ಮಟ್ಟದಲ್ಲಿ ತೆರೆದುಕೊಳ್ಳುವಿಕೆ

ಭಾಷೆಯನ್ನು ಜಾಗತೀಕ ಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡುವುದು ಮುಖ್ಯವಾಗುತ್ತದೆ. ಆ ಭಾಷೆಯಲ್ಲಿ ಇರುವ ವಿಶೇಷತೆಗಳು ಅದರೊಳಗೆ ಇರುವ ನೆಲ ಮೂಲದ ಸಂಸ್ಕೃತಿಯ ಬೇರುಗಳು ಜಗತ್ತಿಗೆ ತೆರೆದುಕೊಳ್ಳುತ್ತವೆ.

4. 8ನೇ ಪರಿಚ್ಛೇದದ ಕನಸನ್ನು ಕಾಣಬಹುದು

ಈಗಾಗಲೆ 8ನೇ ಪರಿಚ್ಛೇದದ ಪಟ್ಟಿಯಲ್ಲಿ ಸಾಕಷ್ಟು ಭಾಷೆಗಳು ಇವೆ. ಆದರೆ ವಾಜಪೇಯಿ ಪ್ರಧಾನಿಯಾಗಿದ್ದಾಗ ಕೆಲವು ಭಾಷೆಗಳನ್ನು 8ನೇ ಪರಿಚ್ಛೇಧಕ್ಕೆ ಸೇರಿಸಲಾಗಿದೆ. 101ನೇ ತಿದ್ದುಪಡಿಯ ಮೂಲಕ ಯಾವುದೆ ರಾಜ್ಯದ ಅಧಿಕೃತ ಭಾಷೆಯಾಗಿರಬೇಕಿಲ್ಲ. ಅರೆಭಾಷೆ ಕೂಡ 8ನೇ ಪರಿಚ್ಛೇದ ಸೇರುವ ಎಲ್ಲಾ ಅರ್ಹತೆಗಳನ್ನು ಹೊಂದಿದೆ.

5. ನೆಲದ ಭಾಷೆಯ ಅನುವಾದ

ಹೆಚ್ಚು ಸೃಜನಶೀಲ ಸಾಹಿತ್ಯ ಮತ್ತು ಸಂಶೋಧನ ಕೃತಿಗಳು ಇತರ ಭಾಷೆಗಳಿಗೆ ಅನುವಾದವಾಗಬೇಕು. ಇತರ ಭಾಷೆಗಳಿಂದ ಆಮದುಗೊಳ್ಳಬೇಕು. ಆಗ ಮಾತ್ರ ಒಂದು ಭಾಷೆ ಹೆಚ್ಚು ಬಲಗೊಳ್ಳಲು ಸಾಧ್ಯ. ಪರಸ್ಪರ ವಿನಿಮಯದಿಂದ ಮಾತ್ರ ಭಾಷೆಯು ಬೆಳವಣಿಗೆಯನ್ನು ಹೊಂದಬಹುದು ಇಲ್ಲದೆ ಹೋದರೆ ಅದರ ನಾಶಕ್ಕೆ ಅದುವೆ ಕಾರಣವಾಗುತ್ತದೆ.

6. ಸಂವಹನ ಭಾಷೆ.

ಒಂದು ಭಾಷೆಯು ಒಂದು ಸಮುದಾಯದ ಭಾಷೆ ಅಲ್ಲ ಅದು ಸಮಸ್ತರ ಸೊತ್ತು. ಮಾತೃಭಾಷೆ ಎಂದು ಸರಳವಾಗಿ ಹೇಳುತ್ತೇವೆ. ಆದರೆ ತಾಯಿ ಭಾಷೆ ಎಂದಾಗುತ್ತದೆ. ನಾನು ಹುಟ್ಟಿದ ನೆಲಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಅದು ಅಭಿಮಾನವನ್ನು ಸಹ ಪ್ರತಿನಿಧಿಸುತ್ತದೆ. ಅನ್ನದ ಭಾಷೆಯಾಗಿ ಗುರುತಿಸಿಕೊಳ್ಳಬೇಕು ಆಗ ಮಾತ್ರ ಉಳಿಕೆ ಸಾಧ್ಯ.

7. ಪ್ರಜಾಪ್ರಭುತ್ವದಲ್ಲಿ ವಿಚಾರ ವಿಮರ್ಶೆಗೆ ಅವಕಾಶ

ಅರೆಭಾಷಿಕ ಪ್ರದೇಶದಲ್ಲಿ ಅರೆಭಾಷೆಯಲ್ಲಿನ ವಿಚಾರಗಳ ಚರ್ಚೆಯಾಗಬೇಕು ಆಗ ಮಾತ್ರ ಪ್ರಜಾಪ್ರಭುತ್ವ ಗಟ್ಟಿಗೊಳ್ಳುವುದು. ನ್ಯಾಯಾಲಯಗಳಲ್ಲಿ ಸಹ ಬಳಕೆಗೆ ಬಂದರೆ ಜನರಿಗೆ ಅನೂಕೂಲವಾಗುತ್ತದೆ. 19.530 ಭಾಷೆಗಳು ನಮ್ಮ ದೇಶದೊಳಗೆ ಜೀವಂತ ಇದ್ದೂ ಈ ಭಾಷೆಗಳಲ್ಲಿ ವಾದಗಳಿಗೆ ಅವಕಾಶ ಸಿಕ್ಕಾಗ ಪ್ರಜಾಪ್ರಭುತ್ವಕ್ಕೆ ಹೆಚ್ಚು ತೂಕ ಸಿಗುತ್ತದೆ.

8. ವಿದೇಶಿಯರಿಗೆ ಭಾಷೆ, ಸಂಸ್ಕೃತಿಯ ಅಧ್ಯಯನಕ್ಕೆ ಅವಕಾಶ

ವಿದೇಶಿಯರು ತಮ್ಮ ಭಾಷೆಯ ಅಧ್ಯಯನ ಮತ್ತು ಸಂಸ್ಕೃತಿಯ ಅಧ್ಯಯನ ನಡೆಸಲು ಅನೂಕೂಲವಾಗುವ ದೃಷ್ಟಿಯಿಂದ ಭಾಷೆ ಮೇಲೆ ಸಮುದಾಯದ ಮೇಲೆ ದೊಡ್ಡ ಜವಾಬ್ದಾರಿಯು ಇದೆ. ಒಂದು ಭಾಷೆಯ ಅಸ್ತಿತ್ವ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಬಹುಪಾಲು ಸಾಹಿತ್ಯದ್ದು, ಸಂಶೋಧನೆಯದ್ದು ಆಗಿರುತ್ತದೆ. ಈ ಮಾತು ಸರಳವಾಗಿ ಮೇಲ್ನೋಟಕ್ಕೆ ನಿಜ ಎಂದು ಕಾಣುತ್ತದೆ. ಇದರಲ್ಲಿ ಜಾನಪದ ಮತ್ತು ಶಿಷ್ಟ ಎಂದೂ ವಿಂಗಡಿಸಿಕೊಳ್ಳಲಾಗುತ್ತದೆ. ಜಾನಪದ ಎನ್ನುವಲ್ಲಿ ಮೌಖಿಕ ಪರಂಪರೆಗೆ ಹೆಚ್ಚು ಒತ್ತು ನೀಡುತ್ತದೆ. ಶಿಷ್ಟ ಎನ್ನುವಲ್ಲಿ ಅಕ್ಷರ ದಾಖಲೆಗಳು ಮಹತ್ವದ್ದಾಗಿರುತ್ತದೆ. ಇಂದಿಗೂ ಗ್ರಾಮ್ಯ, ಅನಕ್ಷರಸ್ಥ, ಅಕ್ಷರಸ್ಥ, ಪದವೀಧರ–ಹೀಗೆ ವಿಭಿನ್ನ ನೆಲೆಗಳಲ್ಲಿ ಭಾಷಾಸ್ವರೂಪದ ಅಂತರವನ್ನು ಸೂಕ್ಷ್ಮವಾಗಿ ಗುರುತಿಸಬಹುದು. ಅದು ಪ್ರಾದೇಶಿಕ, ಸುತ್ತಮುತ್ತಲ ಪರಿಸರ ಇತ್ಯಾದಿ ಅಂಶಗಳಿಂದಲೂ ಸಹ ಪ್ರಭಾವಿಸಬಹುದು.

ಸವಾಲುಗಳು

1. ಭಾಷೆಯ ಹೇರಿಕೆ

ತ್ರೀಭಾಷಾ ಸೂತ್ರ ಎನ್ನುವುದು ದೇಶದಲ್ಲಿ ಇರುವ ನಿಯಮ ಕನ್ನಡ, ಹಿಂದಿ, ಇಂಗ್ಲಿಷ್ . ಯಾಕೆ ಬಹುಭಾಷಾ ನಿಯಮ ಅಂತಾಗಬಾರದು? ಅರೆಭಾಷೆ, ತುಳು, ಕೊರಗ, ಕೊಡವ, ಹವಿಗನ್ನಡ, ಕುಂದಗನ್ನಡ, ಕೋಟಗನ್ನಡ.. ಇತ್ಯಾದಿಗಳು. ಭಾಷಾ ನೀತಿಯನ್ನು ರೂಪಿಸಬೇಕಾದ ಅನಿವಾರ್ಯತೆ ಇಂದು ಬಂದಿದೆ. ಇಲ್ಲಿಯವರೆಗೆ ಯಾವುದೆ ಭಾಷಾ ನೀತಿ ನಮ್ಮ ದೇಶದಲ್ಲಿ ಇಲ್ಲ. 19530 ಭಾಷೆಗಳು ನಮ್ಮ ದೇಶದಲ್ಲಿ ಜೀವಂತ ಇರುವಾಗ ಯಾಕೆ ಇದುವರೆಗೆ ಭಾಷಾನೀತಿ ಇಲ್ಲದೆ ಇರುವುದೆ ಆಶ್ಚರ್ಯ! ಭಾಷೆಯ ಬಗ್ಗೆ ಯಾರೊಬ್ಬ ಜನ ಪ್ರತಿನಿಧಿಯೂ ತಲೆಕೆಡಿಸಿಕೊಂಡಿಲ್ಲ. ಇದು ದುರದೃಷ್ಟಕರ ಸಂಗತಿ ಕೂಡ. ಭಾಷಾ ನೀತಿ ಬಂದರೆ ಕೆಲವು ಭಾಷೆಗಳಿಗೆ ಅನೂಕೂಲವಾಗುತ್ತದೆ. ಇಲ್ಲದೆ ಹೋದರೆ ಇತರ ಭಾಷೆಗಳ ಹೇರಿಕೆ ನಮ್ಮ ಮೇಲೆ ನಡೆಯುತ್ತಲೆ ಸಾಗುತ್ತದೆ.

2. ಜನಗಣತಿಯ ಭಾಗವಾಗಿಲ್ಲದಿರುವುದು.

ಅಧಿಕೃತವಾಗಿ ಅರೆಭಾಷಿಕರ ಸಂಖ್ಯೆ ಲಭ್ಯವಿಲ್ಲದೆ ಇರುವುದು ಬಹಳ ಅವಕಾಶವನ್ನು ಅದು ಕಿತ್ತು ತಿನ್ನುತ್ತದೆ.

ಅರೆಭಾಷೆ ಎನ್ನುವುದನ್ನು ಜನಗಣತಿಯು ಹೀಗೆ ಸೇರ್ಪಡೆಗೊಳಿಸಿದರೆ ಭಾಷಿಕರ ಸಂಖ್ಯೆ ಸುಲಭವಾಗಿ ಅಧಿಕೃತವಾಗಿ ನಮಗೆ ಲಭ್ಯವಾಗಬೇಕು. ಇದರ ಕುರಿತಂತೆ ಯಾರು ಆ ಭಾಷಿಗರು ಯೋಚಿಸಿದಂತೆ ಕಾಣುತಿಲ್ಲ.

**3. ಏಕ ಸಂಸ್ಕೃತಿಯ ಚಿಂತನೆ**

ಬಹುಭಾಷಿಕ ಸಂದರ್ಭದಲ್ಲಿ ಒಂದು ಭಾಷೆಯನ್ನು ಇನ್ನೊಂದು ಭಾಷೆಯು ನಿಯಂತ್ರಿಸುವ ಕೆಲಸವನ್ನು ಮಾಡುವ ಪ್ರಯತ್ನ ಮಾಡುತ್ತದೆ. ಇಂತಹ ಸಂದರ್ಭದಲ್ಲಿ ಭಾಷೆಯನ್ನು ಗಟ್ಟಿಗೊಳಿಸುವ ಕೆಲಸ ಆಗಬೇಕಿದೆ. "ಹಿಂದು ಸಂಸ್ಕೃತಿ"ಯ ಹಾಗೆ ಎಂದು ದೊಂಬದಾಸರ ಮಾತುಗಳ ಪ್ರಾಮುಖ್ಯತೆಯನ್ನು ಪಡೆದಿದೆ. ನಮ್ಮ ಆಚರಣೆಗಳು ಇನ್ನೊಂದು ಸಮುದಾಯದ ಅನುಕರಣೆ ಯಾ ? ಎನ್ನುವ ಪ್ರಶ್ನೆ ಸಹಜವಾಗಿ ಏಳುತ್ತದೆ. ಇದಕ್ಕೆ ಸಮಜಾಯಿಸಿಯ ಉತ್ತರವನ್ನು ಹುಡುಕಿಕೊಳ್ಳಬೇಕಿದೆ.

**4. ಭಾವನಾತ್ಮಕ ಸಂಬಂಧ ಕಡಿಮೆ**

ತುಳುವರ ಹಾಗೆ ಮಲೆಯಾಳಿಗರ ಹಾಗೆ ಭಾಷೆ ಜೊತೆಗೆ ಅವಿನಾಭಾವ ಸಂಬಂಧಗಳು ಬಹಳ ಕಡಿಮೆ ಎಂದು ಹೇಳಬಹುದು. ಜನಾಂಗದ ವಿಶಿಷ್ಟ ಭಾಷೆಯೊಂದು ತನ್ನ ಸಂವಹನದ ಸಾಧ್ಯತೆಯನ್ನಾಗಿಸಿಕೊಂಡಿದೆ ಅದನ್ನೆ ಬದುಕಾಗಿಸಿಕೊಂಡಿದೆ. ಅರೆಭಾಷೆ ತನ್ನ ಅನನ್ಯತೆಗಳನ್ನು ಉಳಿಸಿಕೊಳ್ಳುವಲ್ಲಿ ಸಾಕಷ್ಟು ಸವಾಲನ್ನು ಎದುರಿಸಿದೆ. ಸಾಕಷ್ಟು ಗಟ್ಟಿತನದಿಂದಲೆ ಅದು ಅಸ್ಮಿತೆಗಳನ್ನು ಉಳಿಸಿಕೊಳ್ಳಲು ಸಹಕಾರಿಯಾಗಿದೆ.

**5. ರಾಷ್ಟ್ರದ ಪರಿಕಲ್ಪನೆ ಮತ್ತು ಹೇರಿಕೆಯ ತಂತ್ರಗಳು**

ಪ್ರಜಾಪ್ರಭುತ್ವದಲ್ಲಿ ಒಂದು ಭಾಷೆ ಎನ್ನುವುದು ಇಲ್ಲ. ಹಲವು ಭಾಷೆ , ಹಲವು ರಾಜ್ಯ ಎನ್ನುವ ಸಂದರ್ಭದಲ್ಲಿ ಒಂದು ರಾಷ್ಟ್ರ ಎನ್ನುವುದು ಸರಿಯಲ್ಲ ಕೂಡ. ಕರ್ನಾಟಕವೆಂಬುದು ಒಂದು, ಕನ್ನಡವೆಂಬುದು ಹಲವು. ಇಂತಹ ಮಾತು ಚಾಲ್ತಿಯಲ್ಲಿ ಇದೆ. ಆ ಮಾತನ್ನು ನಿರಾಕರಿಸಬೇಕಿಲ್ಲ, ತಕ್ಷಣಕ್ಕೆ ವಾಗ್ವಾದ ಆರಂಭಿಸಬೇಕಿಲ್ಲ. ವಿಶ್ವ ಮಾನ್ಯತೆ ಪಡೆದ ಭಾರತದೊಳಗೆ ಕರ್ನಾಟಕ ರಾಜ್ಯವೆಂದು ಸ್ವತಂತ್ರ ಅಸ್ತಿತ್ವ ಇದೆ. ಕರ್ನಾಟಕದಲ್ಲಿ ಪ್ರಾದೇಶಿಕ ಭಾಷೆಗಳಿಗೂ ಅವಕಾಶ ಇರಬೇಕಲ್ಲ? ಭಾರತ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವ ರಾಷ್ಟ್ರ. ಸಂಯುಕ್ತ ರಾಜ್ಯಗಳ ಅಕ್ಷಿಕೆಯಲ್ಲಿದೆ. ಸುಮಾರು ಹದಿನೈದು ರಾಷ್ಟ್ರ ಭಾಷೆಗಳನ್ನು ಗುರುತಿಸಲಾಗಿದೆ. ಭಾಷಾ ವೈವಿಧ್ಯತೆ ಎನ್ನುವುದು ಭಾರತ ದೇಶವು ಅನನ್ಯತೆಯ ಒಂದು ಲಕ್ಷಣ. ಆಧುನಿಕ ಜಗತ್ತನ್ನು ಗ್ರಾಮವಾಗಿಸುವ ಕನಸಿನೊಂದಿಗೆ ಅದನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ದಾಪುಗಾಲು ಇಡುತ್ತಿರುವ ಸ್ವಾರ್ಥ ಮತ್ತು ಸ್ವ ಅಭಿವೃದ್ಧಿ ಎನ್ನುವುದು ಸತ್ಯ ಮಾತು. ಭಾಷೆ ಎನ್ನುವುದು ಕೇವಲ ಮಾರುಕಟ್ಟೆಯಿಂದ ಉಳಿದುಕೊಂಡಿಲ್ಲ ಅದು ಸಂಸ್ಕೃತಿಯ ಭಾಗವಾಗಿದೆ. ಈಗಾಗಲೆ ನಮ್ಮಾಳುವ ಇಂಗ್ಲಿಷ್ ದೊಡ್ಡ ಭಾಷೆ ಎಂಬ ಭ್ರಮೆ ನಮ್ಮ ಮೇಲೆ ಕೂತು ಬಿಟ್ಟಿದೆ. ಪ್ರಾದೇಶಿಕ ಎನ್ನುವ ನಮ್ಮ ಮಾತೃಭಾಷೆ ಸೊರಗುವ ಸ್ಥಿತಿ ತಲುಪಿದೆ. ತಲ್ಲಣಗಳು ಆರಂಭವಾಗಿದೆ.

**6. ಸಮುದಾಯಕ್ಕೆ ಭಾಷೆಯ ಆರೋಪಿಸುವುದು**

ಭಾಷೆಯ ಬೆಳವಣಿಗೆ ಲಭ್ಯ ಇರುವುದು ಒಂದು ಭಾಷೆ ಒಂದು ಸಮುದಾಯದ ಸೊತ್ತು ಅಲ್ಲ. ಅದು ಆ ಪ್ರದೇಶದ ಸೊತ್ತು ಎನ್ನುವ ಅಂಶಗಳನ್ನು ಪ್ರತಿಪಾದಿಸಲಾಗುವುದು. ಗೌಡ ಕನ್ನಡ ಎಂದ ಕ್ಷಣ ಗೌಡ ಜನಾಂಗಕ್ಕೆ ಸೇರಿದ ಭಾಷೆ ಆರೋಪಿಸಿದರೆ, ಅವರ ಮಿತಿಯಾಗಿ ಪರಿಣಮಿಸುತ್ತದೆ. ಒಂದು ಭಾಷೆಯು ಜಾತಿಯ ಗಡಿ ರೇಖೆಯನ್ನು ಮೀರಿದರೆ ಭಾಷೆಯು ಬೆಳೆಯಲು ಸಾಧ್ಯ.

**ಮುಕ್ತಾಯ**

ಒಂದು ಭಾಷೆಯ ಕುರಿತು ಆತಂಕದಿಂದ ಯೋಚಿಸುವ ಸ್ಥಿತಿ ಇಂದು ನಿರ್ಮಾಣವಾಗಿದೆ. ಇಂತಹ ಸಂದರ್ಭದಲ್ಲಿ ಮಾತೃಭಾಷೆಯ ಚಿಂತನ ಕ್ರಮ ಕದಲತೊಡಗಿದೆ. ಮಾತೃಭಾಷೆ ಎನ್ನುವುದು ನೆಲದ ಸತ್ವವೂ ಹೌದು. ಅದರೊಂದಿಗೆ ಎಂತದ್ದೆ ಸಂವಹನವಾದರೂ ಸುಲಭವಾಗುತ್ತದೆ. ಇಂಗ್ಲಿಷ್ ಮತ್ತು ಹಿಂದಿ ಎನ್ನುವ ಪ್ರಭಾವಶಾಲಿ ಭಾಷೆಗಳ ನಡುವೆಯೇ ಸಂಘರ್ಷ, ಸಮನ್ವಯ ತನ್ನತನವನ್ನು ಸಾಧಿಸಿಕೊಂಡ ಗೌಡಕನ್ನಡ /ಅರೆಭಾಷೆ ಎನ್ನುವ ಮಾತೃಭಾಷೆಯ ವಿಶಿಷ್ಟತೆಯನ್ನು ಗುರುತಿಸಬಹುದು.

ಭಾಷಾ ಆಕ್ರಮಣದಿಂದ ಸಮಸ್ಯೆ ಎದುರಾಗಿದೆ. ಅರೆಭಾಷೆಯಲ್ಲಿ ಏನಿದೆ? ಎನ್ನುವ ಪ್ರಶ್ನೆ ನಮ್ಮ ಮುಂದೆ ಎರಗುತ್ತದೆ. ಶಕ್ತಿಶಾಲಿಯಾಗಿ ಪ್ರತಿಪಾದನೆ ಮಾಡಬೇಕಾದ ಅನಿವಾರ್ಯತೆ ಎದುರಾಯಿತು. ಯಾವುದೇ ಭಾಷೆಯ ಸಮಸ್ಯೆ-ಸವಾಲುಗಳ ಹಿನ್ನೆಲೆಯಲ್ಲಿ ಗಮನಿಸಬಹುದು. ನಾವು ಗಮನಿಸುವ ಹೊತ್ತಿಗೆ ಗೌಡಕನ್ನಡ. ಅದನ್ನು ಶತಮಾನಗಳ ಇತಿಹಾಸ ಪರಂಪರೆಗಳಿಂದ ಅದನ್ನು ಗಮನಿಸಬಹುದು. ಆಧುನಿಕತೆಯ ಹೊಸ ಅನ್ವೇಷಣೆಗಳ ಅರ್ಥದಲ್ಲಿ ದಿನೇ ದಿನೇ ಸರಳತೆಯನ್ನು ಸಂವಹನ ಅರ್ಥದಿಂದ ಒಳಗೊಂಡರೂ, ಸಾಕಷ್ಟು ಅಪಾಯಗಳನ್ನು ಅದು ಸೃಷ್ಟಿಸುತ್ತಿದೆ. ಅನಿವಾರ್ಯತೆಯ ಹಿನ್ನೆಲೆಯಲ್ಲಿ ಸವಾಲುಗಳನ್ನು ಅವಲೋಕಿಸುವುದು ಒಳಿತು ಎನ್ನುವುದು ನನ್ನ ಅಭಿಪ್ರಾಯ.

❑

# ಕೊಡಗ್‌ನ ಕಟ್ಟಿ ಬೆಳೆಸುವಲ್ಲಿ ಅರೆಭಾಷೆ ಗೌಡ ಜನಾಂಗದ ಪಾತ್ರ

- ಕೈಮಂದನ ವೇಣುಗೋಪಾಲ್
ಯಲಹಂಕ, ಬೆಂಗಳೂರು

ಕೊಡಗ್‌ನ ಕಟ್ಟಿ ಬೆಳೆಸುವಲ್ಲಿ ಅರೆಭಾಷೆ ಗೌಡ ಜನಾಂಗದ ಪಾತ್ರ ಬಹಳ ದೊಡ್ಡದ್. ಮೂರ್ ಶತಮಾನದ ಹಿಂದೆ ಕೊಡಗ್‌ಗೆ ಬಂದ್ ಮಹತ್ತರ ಕೃಷಿ ಸಮಾಜ ಇಂದ್ ಎಲ್ಲಾ ರಂಗಗಳಲ್ಲಿ ಮುಖ್ಯವಾಹಿನಿಗೆ ಬಂದ ಬಗ್ಗೆ ನಾವೆಲ್ಲಾ ಹೆಮ್ಮೆ ಪಡೊಕು. ಜಾತಿ ಮತ್ತೆ ಪದ್ಧತಿಗಳ ಬಗ್ಗೆ ಬರೆಯಕಾಕನ ಈ ಸಂಬಂಧ ಒಂದಕ್ಕೆ ಒಂದ್ ಅಂಟಕಂಡ ಭಾಷೆ ಪದ್ದತಿ ಪ್ರಗತಿಗಳ ವಿಷಯ ವಿಚಾರಗಳ ಬಗ್ಗೆ ನಾವ್ ಗ್ಯಾನ ಮಾಡಿಕಾದೆ. ಒಂದ್ ಜನಾಂಗದ ಭಾಷೆ ಒಂದಾದರೂ ಭೌಗೋಳಿಕ ಹಿನ್ನೆಲೆಲಿ ದ. ಕನ್ನಡ ಮತ್ತೆ ಕೊಡಗ್ ಗೌಡ ಜನಾಂಗನ ಮೇಳೈಸಿಕಂಡ್ ವಿಚಾರ ಬರೆಯಕಾದೆ. ಕೊಡಗ್‌ನ ಅರೆಭಾಷೆ ಜನಾಂಗದ ಬೆಳವಣಿಗೆ ಮತ್ತೆ ಹಿರಿಮೆ ಬಗ್ಗೆ ನಾವ್‌ಗೆ ಮಾತಾಡಿಕಾಕ್‌ನ. ನಾವು ಯಾರಿಗೆ ಕಮ್ಮಿ ಇಲ್ಲೇತ ಹೇಳಿ ತೋರ್‌ಸ್ಕಾಕ್‌ನ ನಾವು ಇಲ್ಲಿ ಎಡ್‌ಗ್‌ತೊಳೊತ ಒಮ್ಮೆ ನೋಡಿಕಣೊಕು. ದಕ್ಷಿಣ ಜಿಲ್ಲೆ ಗೌಡ್‌ಗ ಮತ್ತೆ ಕೊಡಗ್‌ನ ಗೌಡಗ ಒಂದೇ ಬೇರಿನವಾದರೂ ಪದ್ಧತಿಗಳಲ್ಲಿ ವ್ಯತ್ಯಾಸ ಕಂಡ್ ಬಂದದೆ. ಯಾಕೆ ತೇಳ್‌ರೆ ಕೊಡಗ್‌ನ ಗೌಡ್‌ಗ ಜನಾಂಗದವು ಮೂಲತಃ ದಕ್ಷಿಣ ಕನ್ನಡ ಜಿಲ್ಲೆಂದ ಕೊಡಗ್‌ನ ಹಡ್ಲ್ ಬಿದ್ದ ಜಾಗಕ್ಕೆ ಬಂದ್ ಅದನ್ನ ಊರ್ಜಿತ ಗೊಳಿಸಿಕಾಕನ ಕೊಡಗ್‌ಲಿ ರೂಢಿಸಿಕಂಡ ಪದ್ಧತಿ, ಉಡ್‌ಗೆ ತೊಡುಗೆ, ಹಬ್ಬಹರಿದಿನಗಳ ಸಂಪ್ರದಾಯಗ ಬುಡಂದ ಬಂದ್‌ದ ಇಲ್ಲೇ ಎಡೆಲ್ ಬಂದದ ತೇಳುವ ಬಗ್ಗೆ ವಿಶ್ಲೇಷಣೆ ಆಕು. ಅರೆಭಾಷೆ ಉಳ್‌ಸುವ ಬಗ್ಗೆ ಮಾತಾಡ್‌ಕಾಕನ ನಮ್ಮ ಬುಡಂದ ಪದ್ಧತಿನ ಗ್ಯಾನ ಮಾಡಿಕೊಂಬುದರ ಬಗ್ಗೆನೂ ಪಳ್‌ಮೆ ಮಾಡೊಕು.

ಶ್ರೀ ಕೋಡಿ ಕುಶಾಲಪ್ಪ ಗೌಡರು ಒಳ್ಳೆ ಭಾಷಾ ತಜ್ಞರ್. ಅವ್ ಬರ್ದ "ಗೌಡ ಕನ್ನಡ" ಪುಸ್ತಕ ಓದಿದೆ. ನಮ್ಮದ್ ಅರೆಭಾಷೆಯಲ್ಲಿ ಅರೆಭಾಷೆ ತೇಳ್‌ರೆ ಅರ್ಧಭಾಷೆ. ಅದನ್ನ ನಾವ್ ಗೌಡ ತೇಳಿ ಕರೆಯೊಕುತೇಳಿ ಬರ್ದೊಳೊ. ಅರೆಭಾಷೆ ಪದತ ಹೇಳುವ ಕಡೇಲಿ ಸೇರಿಕಂಡ್‌ದ್‌ತ ಹೇಳುವ ಅಭಿಪ್ರಾಯ ಉಟ್ಟು. ಆದರೆ ಪಂಡ್‌ದಲೇ ಅರೆಭಾಷೆತ ಹೇಳಿ ಕರೆದರೆ ತಪ್ಪೇನಿಲ್ಲ. ಶ್ರೀ ಕುಶಾಲಪ್ಪ ಗೌಡರು ಗೌಡ ಕನ್ನಡ ಭಾಷೆಯ ಹುಟ್ಟು ಮತ್ತೆ ಅಡ್ ಮಾತಾದ ವಿಚಾರದ ಬಗ್ಗೆ ಸಂಶೋಧನಾತ್ಮಕವಾಗಿ ಬರೆದೊಳೊ.

ಇಂದ್ ಕೊಡಗ್‌ನ ಅರೆಭಾಷೆ ಮತ್ತೆ ಪದ್ಧತಿಲಿ ಎರಡ್ ದಾರಿ ಕಂಡ್ ಬಂದದೆ. ಇಂದ್ ಈ ವಿಷಯದ ಬಗ್ಗೆ ಏಕತೆ ಮತ್ತೆ ಸ್ಪಷ್ಟತೆ ಬರಕು. ನಾವ್‌ಗ ಇಂದ್‌ನ ದಿನಲಿ ಎಲ್ಲಾ ಕ್ಷೇತ್ರಲಿ ಮುಂದ ಬಂದೊಳೊ ನಿಜ. ಹಿಂಗೆ ಮುಂದೆ ಬಾಕನ ನಮ್ಮ ಬುಡಂದ ಪದ್ಧತಿನ ನಮ್ಮ ಕುಲದ ಮೂಲ ಸಂಪ್ರದಾಯತ್ತೇಳಿ ಆಚರಣೆ ಮಾಡುದರ ಬಗ್ಗೆ ಅವಲೋಕನ ಮಾಡಿಕಂಬ ಸಂದರ್ಭ ಇಂದ್ ಬಂದುಟು.

ಇಂದ್ ಹಲವಾರ್ ಕಾರಣಗಳಿಂದ ಅರೆಭಾಷೆನ ಜೀವಂತಿಕೆಗೆ ಪೆಟ್ಟ್ ಬೀಳ್‌ತ ಉಟ್ಟು. ಇದ್‌ಕೆ ತುಂಬಾ ಕಾರಣಗ ಒಳೊ. ಎಲ್ಲೊ ಒಂದ್ ಕಾಲಲಿ ಬಂದ ಕೀಳರಿಮೆ, ಓದಿಕೆ ಒಂದ್ ಭಾಷೆ. ಬರೆಯಕೆ ಒಂದ್ ಭಾಷೆ. ನೆರೆಭಾಷೆಗಳ ಪ್ರಭಾವ ಕುಲ ಬುಟ್ಟು ಕುಲಲಿ ನಡೆವ ಮದುವೆಗ ಹಿಂಗೆ ತುಂಬಾ ಕಾರಣ ಒಳೊ. ಇದರ್‌ಂದ ನಮ್ಮ ಭಾಷೆ ಲಾಚಾರ್ ಆಗ್‌ತ ಉಟ್ಟು. ಅಮೆರಿಕದ ಭಾಷಾ ತಜ್ಞ ಗೇಬ್ರಿಯಲ್ ಪೆರೆಜ್ ಬಯೆಜ್ ಹೇಳ್‌ವ ಪ್ರಕಾರ A language can unfortunality become endangered relatively easily . It happens when fewer and fewer people speak it and especially when childrens stop learning it as the dominated language. This often occurs because the more dominant language percieved or persent has a condition for ensuring quality of life, education and profesion.

ಇದನ್ನ ಯಾಕೆ ಇಲ್ಲಿ ತಂದೆತ ಹೇಳ್‌ಕೆ ಸದ್ಯದ ಪರಿಸ್ಥಿತಿ ನಾವ್ ಅರೆಭಾಷೆನ ಅಲ್ಪಭಾಷೆಯಾಗಿ ಉಳಿಸಿಕೊಂಬ ಬಗ್ಗೆ ಹೆಚ್ಚಿನ ಒತ್ತ್‌ಕೊಡಕು. ಈ ವಿಷಯಲಿ ಸ್ವಮೂರ್‌ತರೆ ಭಾಷೆ ಕ್ಷೀಣ ಆಗುವ ಎಲ್ಲಾ ಲಕ್ಷಣ ಉಟ್ಟು.

ಇನ್ ನಮ್ಮ ಜನಾಂಗದ ಪ್ರಗತಿ ಬಗ್ಗೆ ಮಾತಾಡಿಕೆ ಹೋದರೆ, ಸ್ವಾಭಾವಿಕವಾಗಿ ಮತ್ತೆ ಸಾಮಾಜಿಕವಾಗಿ

ಸಮಾಜದ ಪ್ರಗತಿ ಆಗತ ಹೋದು ಸಹಜ ಪ್ರಕ್ರಿಯೆ. ನಮ್ಮ ಸಮಾಜದ ಆರ್ಥಿಕ ಪ್ರಗತಿ ಆಗತ ಇದ್ದರ್ ಕಣ್ಣಿಗೆ ಕಾಣದೆ ಇವರೆ ಸಮಾಜದ ಸರ್ವತೋಮುಖ ಬೆಳವಣಿಗೆ ಇನ್ನೂ ಆಕು. ಯಾಕೆತ ಹೇಳ್‌ರೆ ಇಂದ್‌ನ ದಿನಮಾನಲಿ ನಾವು ಜಾಗ ತಕಂಡ್ ಕಲ್ಯಾಣ ಮಂಟಪ ಕಟ್ಟುದು, ಕುಟುಂಬಗಳ ಕ್ರಿಕೆಟ್ ಸ್ಪರ್ಧೆ ನಡೆಸುದು, ಸಾಧಕರ ಸನ್ಮಾನ ಮಾಡುದು, ಗೇಂಟ್‌ಗೆರೆ ಉದ್ದ ಕುಪ್ಪಸಪಟ್ಟೆ ಹಾಕಿಕಂಡ್ ವಾಲಗಕ್ಕೆ ಕುಣಿಯೊದು ಈ ಎಲ್ಲಾ ಪ್ರದರ್ಶನಗಳ ಬಗ್ಗೆ ಹೆಚ್ಚ್ ಗಮನ ಕೊಡ್‌ತಾ ಒಳೊ. ಈ ಎಲ್ಲಾ ಬೆಳವಣಿಗೆಗ ನಮ್ಮ ಕುಲದ ಮೂರನೆ ತಲೆಮಾರ್‌ಲಿ ಬೆಳೆದ್ ಬಂದವು. ನಾವು ಸಾಧಕರ ಸನ್ಮಾನ ಮಾಡೊಕು ನಿಜ. ಆದರೆ ಸಮಾಜದ ಸಾಧಕರ ಹುಟ್ಟು ಹಾಕುವಂತ ವಾತಾವರಣ ತರೊಕು.

ಕಲ್ಯಾಣಮಂಟಪ ಕಟ್ಟುದೇ ಜನಾಂಗದ ಅಭಿವೃದ್ಧಿ ತೇಳಿ ನಮ್ಮ ಅಂದ್‌ನ ಹಿರಿಯರ್ ತಿಳಕಂಡಿದ್ದರೆ ಇಂದ್‌ನ ದಿನಲಿ ಪ್ರತಿಯೊಬ್ಬರ ನಾಲಿಗೆಲಿ ಇರುವ ಅಂದ್ ಮತ್ತೇ ಇಂದ್‌ನ ಗೌಡ ಬೋರ್ಡಿಂಗ್‌ನ ಸ್ಥಾಪನೆ ಆಗ್‌ತಾ ಇತ್ತ್‌ಲೆ. ಅಂದ್‌ನ ದಿನಲಿ ಆ ಕಟ್ಟಡನ ಕಲ್ಯಾಣ ಮಂಟಪ ಮಾಡದಿದ್ದರೆ ನಮ್ಮ ಗ್ರಾಮಗಳ ಅಂದ್‌ನ ಮಕ್ಕ ಮಡಿಕೇರಿಗೆ ಬಂದ್ ವಿದ್ಯಾಭ್ಯಾಸ ಮಾಡ್‌ಕೆ ಆಗ್‌ತಿತ್ತ್‌ಲೆ. ಅಂದ್ ಆ ಕಟ್ಟಡನ ವಿದ್ಯಾರ್ಥಿ ನಿಲಯ ಮಾಡ್‌ದರಿಂದ ಗೌಡ ಮಕ್ಕ ವಿದ್ಯೆ ಕಲ್‌ತ್ ರಾಜ್ಯಲಿ ಮುಂಚೂಣಿಗೆ ಬರುವಂಗೆ ಆಗುಟು. ಆ ಕಟ್ಟಡನ ನಮ್ಮ ಜನಾಂಗದ ಹೆಮ್ಮೆಯ ಚಾರಿತ್ರಿಕ ಕಟ್ಟಡತ ಹೇಳಿ ನೆನಪಿಕಂಬೋದು ನಮ್ಮ ಜವಾಬ್ದಾರಿಯಾಗುಟು. ಸಮಾಜಲಿ ಮುಂದೆ ಬಂದವು ಬೇರೆ ಬೇರೆ ನಗರಗಳಲಿ ಸಂಘ ಸಂಸ್ಥೆ ಕಟ್ಟಿಕಂಡ್ ಸಮಾಜದ ಸೇವೆಲಿ ತೊಡಗಿಸಿಕಂಡದ್ ಒಳ್ಳೆದೇ ಆದರೆ ನಮ್ಮ ಗುರಿ ಮಾತ್ರ ಜಾಗ ತಕಂಡ್ ಕಲ್ಯಾಣ ಮಂಟಪ ಕಟ್ಟುದು ಅಲ್ಲ. ಗೌಡ ಜನಾಂಗದ ಶೈಕ್ಷಣಿಕ, ಆರ್ಥಿಕ, ಆರೋಗ್ಯ ಮತ್ತೆ ಕೃಷಿ ಸಮಸ್ಯೆಗಳಿಗೆ ಒತ್ತ್ ಕೊಡುವ ಯೋಜನೆಗಳ ಬಗ್ಗೆ ಹೆಚ್ಚು ಚಿಂತೆ ಮಾಡೊಕು.

ಕೊಡಗು ಗೌಡ ಜನಾಂಗದ ಮಡಿಕೇರಿಲಿ ಇರುವ ಹಳೆ ಚಾರಿತ್ರಿಕ ಕಟ್ಟಡನ ಜನ ಇಂದ್‌ಗೂ ಅಪ್ಪರ್ ಹಾಸ್ಟೆಲ್ (Upper Hostel) ತ ಹೇಳಿಯೇ ಗುರ್ತಿಸುದು. ಈ ಕಟ್ಟಡನ ಮತ್ತೆ ಅದರ ಚರಿತ್ರೆನ ಉಳಿಸಿಕಂಬಕೋಸ್ಕರ ಅದರ ಪುನರ್ ನಿರ್ಮಾಣ ಮಾಡ್‌ಕಾಕನ ನಮ್ಮ ಮಕ್ಕಳಿಗೆ ಕಡಿಮೆ ಕ್ರಯಲಿ ವಿದ್ಯಾರ್ಥಿ ನಿಲಯ, ಆರೋಗ್ಯಕೇಂದ್ರ ಮತ್ತೆ ಕೃಷಿ ಸಹಕಾರ ಕೇಂದ್ರದಂತಹ ಹೊಸ ಯೋಜನೆಗಳಿಗೆ ನಾಂದಿ ಹೇಳುದು ಮುಖ್ಯವಾದ ವಿಷಯ ಮಾಡಿಕಂಬದ್ ಒಳ್ಳೇದ್. ಇದರಿಂದ ನಮ್ಮ ಆ ಚಾರಿತ್ರಿಕ ಕಟ್ಟಡಕ್ಕೆ ನಾವೆಲ್ಲ ನ್ಯಾಯ ಒದಗಿಸಿದಂಗೆ ಆದೆ.

ಕಡೇಲಿ ಹೇಳುವ ಮಾತ್ ಏನ್ ತೇಳ್‌ರೆ ನಾವು ಸಮಾಜಕ್ಕೆ ಕೆಲಸ ಮಾಡ್‌ಕಾರ್‌ನ ವೈಯಕ್ತಿಕ ಪ್ರತಿಷ್ಠೆ ಮತ್ತೆ ಮನ್ನಣೆ ಮರೆಯಕಾದ್. ದೊಡ್ಡವರ ಸಣ್ಣವರ ಸಮಗ್ರ ಮಾನ್ಯತೆಗೋಸ್ಕರ ಕೆಲಸ ಮಾಡೊಕುತ ಹೇಳುವ ಪ್ರತಿಜ್ಞೆ ತಕಣಕು.

ಗೌಡ ಜನಾಂಗದ ಚರಿತ್ರೆ ಪುಟಗಳಿಂದ ನಾವ್ ಇಂದ್ ಗುಡ್ಡೆ ಮನೆ ಅಪ್ಪಯ್ಯ ಗೌಡರ ಹೋರಾಟನ ಗುರ್ತಿಸಿ ಅವರ ಪ್ರತಿಮೆ ರಸ್ತೆಗೆ ಹೆಸರ್ ಕೊಟ್ಟು ನ್ಯಾಯ ಒದಗಿಸಿಕೊಳೊ. ಅದರ ಜತೇಲಿ ಅವರನ ಕಾಟಕಾಯಿಗೆ, ಕಿಡಿ ಹಚ್ಚಿಸಿ ತಂದವು ಕೆದಂಬಾಡಿ ರಾಮಯ್ಯ ಗೌಡ. ಅಂದ್‌ನ ಸ್ವಾತಂತ್ರ್ಯ ಹೋರಾಟದ ಗೌಡ ಜನಾಂಗದ ಮೂಲ ಪುರುಷತ ಹೇಳ್‌ರೆ ಅವು ಕೆದಂಬಾಡಿ ರಾಮಯ್ಯ ಗೌಡ. ಅವರನ ಕೂಡ ಅಂದ್ ಗಲ್ಲಿಗೇರಿಸಿಳೊ. ಅವರ ಜತೆಲಿ ಕೂಜಿಗೋಡು ಅಪ್ಪಯ್ಯ ಗೌಡ, ಕೂಜಿಗೋಡು ಮಲ್ಲಪ್ಪ ಗೌಡ, ಕುಕ್ಕನೂರು ಚನ್ನಯ್ಯ, ಗುಡ್ಡೆಮನೆ ತಮ್ಮಯ್ಯ ಗೌಡ ಇವರನ್ನೆಲ್ಲಾ ನಾವ ಇಂದ್ ನೆನಪಿಸಕೊಕು. ಇವರನ್ನೆಲ್ಲಾ ಅಂದ್‌ನ ದಿನಲಿ ಜೀವಾವಧಿ ಶಿಕ್ಷೆ ಕೊಟ್ ಸಿಂಗಾಪುರಕ್ಕೆ ಕಳಿಸಿದ್ ಎಲ್ಲವ್ರುಗು ಗ್ಯಾನ ಇದ್ದುದ. ಗುಡ್ಡೆಮನೆ ಅಪ್ಪಯ್ಯ ಗೌಡರ್‌ನ ಕಾಟಕಾಯಿಗೆ ಎಳೆದವೇ ಮೇಲ್ ಹೇಳಿದವ್. ಇಂದ್ ನಮ್ಮ ನಮ್ಮ ಮನಸ್‌ಲಿ ಇಲ್ಲದ್ದೆ ಇದ್ದುದ ಗ್ಯಾನ ಮಾಡ್ತೆ ದುಃಖ ಆದೆ ಅವರನ್ನೆಲ್ಲ ಮನಸ್‌ಲಿ ತುಂಬಿಸಿಕೊಂಡ್ ಎದೇಲಿ ಸ್ಮಾರಕ ಕಟ್ಟಿಕಂಬೋನೂತ ಹೇಳ್‌ತ ನನ್ನ ಲೇಖನ ಮುಗುಸಿನೆ.

❑

# ಲಾಯಿಕಿತ್ತ್ ಆ ಕಾಲ

– ಮಮತ ರವೀಶ ಪಡ್ಡಂಬೈಲು

ಬೆಳ್ಗರಿಗೆ ಮಂದ್ರೀಲಿ ಉಗ್ಗಪ್ಪನ
ಯಕ್ಷಗಾನ ಪದಗಳ ಸುಪ್ರಭಾತ
ಅಜ್ಜಮ್ಮ ಹೇಳ್ತಿದ್ದ ಭೂತದ ಕಥೆ
ಅಜ್ಜಿ ಕಥೆ ಎಲ್ಲವೂ ಈಗಲೂ
ಕೆಬಿಗೆ ಗುಂಯ್‌ಗುಟ್ಟದೆ..
ಆಹಾ! ಆ ಕಾಲ ಎಂತಾ ಲಾಯಿಕಿತ್ತ್!....

ಚೆಪ್ಪುಕುಟ್ಟಿಲಿ ಉಪ್ಪು ಕರಿನ ಬೆರೆಸ್ಕಂಡ್
ಹಲ್ಲುಜ್ಜಿಕೊಂಡ್ ದನಗಳಿಗೆ ಹುಲ್ಲುಹಾಕಿ
ಮೋರೆ ತೊಳ್ಕೊಂಡ್. ಕಣ್ಣುಪಾಯ ಕುಡ್ಕಂಡ್
ಇದ್ದ ಆ ಕಾಲ ಆಹಾ! ಎಂತಾ ಲಾಯಿಕಿತ್ತ್!..

ಜೋಡೆತ್ತ್‌ಗಳ ಹೊಡ್ಕಂಡ್
ಗದ್ದೆ ಪುಣೀಲಿ ನಡ್ಕಂಡ್
ಚುಮು ಚುಮು ಚಳಿಲಿ
ಕೆಲ್ಸ ಮಾಡ್ಕಂಡ್ ಇರ್ತಿದ್ದ ಆ ಗಮ್ಮತ್ತ್
ಆಹಾ! ಆ ಕಾಲ ಎಂತಾ ಲಾಯಿಕಿತ್ತ್!...

ಗದ್ದೆ ಪುಣಿನ ಕೆತ್ತಿದ್, ಪುಣಿನ ಪೂಜಿದ್
ಗದ್ದೆ ಗೋರಿ ಮಾಡ್ಕಂಡ್
ಶೋಭಾನೆ, ಪಾಡ್ದಾನ ಹೇಳಿಕಂಡ್
ಬೇಸಾಯ ಮಾಡ್ದ ಕದ್‌ರ್‌ನ ಪರಿಮಳ
ಆಹಾ! ಆ ಕಾಲ ಎಂತಾ ಲಾಯಿಕಿತ್ತ್!...

ಗದ್ದೆ ಪುಣಿಲಿ ಬೆಳ್ದಾ ಕಬ್ಬುನ
ಹಲ್ಲ್‌ಲಿ ಕಚ್ಚಿ ತಿಂಬತ್ತಿದ್ದೊ
ಕಾಡ್ನಲ್ಲಿ ಸಿಕ್ಕಿದ ನೇರಳೆ. ನೆಲ್ಲಿಕಾಯಿ
ತಿಂಬತ್ತಿದ್ದ ಆ ಖುಷಿ ಈಗ ಎಲ್ಲಿಟ್ಟು?
ಆಹಾ! ಆ ಕಾಲ ಎಂತಾ ಲಾಯಿಕಿತ್ತ್!...

ಮನೇಲಿ ಎಲ್ಲವೂ ಸೇರ್ಕೊಂಡ್
ದೀಪಾವಳಿ, ಬಿಸುಹಬ್ಬ, ಕೆಡ್ಡಸ
ಎಲ್ಲವೂ ಗೌಜಿ ಮಾಡ್ಕಂಡ್ ಖುಷಿ ಕೊಡ್ತಿತ್ತ್
ಆ ಕಾಲ, ಈಗ ಎಲ್ಲನೂ ಮಾಯಾ... ಮಾಯ...
ಆದರೆ ಆಹಾ! ಆ ಕಾಲ ಎಂತ ಲಾಯಿಕಿತ್ತ್....

ಮತ್ತೆ ಬರೋಕು ಗೌಜಿ ಗಮ್ಮತ್ತ್‌ನ ಆ ಕಾಲ
ಜನರ ಸಂಬಂಧಗಳ್ ಬೆಳೆಯೋಕು ನೂರ್ಕಾಲ
ಸಂಸ್ಕಾರ ಸಂಸ್ಕೃತಿ ಉಳಿಯೋಕು ಸದಾಕಾಲ
ಅರೆಬಾಷೆ ಬೆಳೆಯೋಕು ಉಳಿಯೋಕು ಚಿರಕಾಲ.... ❑

# ಅಪಾರ್ಟ್‌ಮೆಂಟ್ ಬದ್ಕ್



ಬಾರಿಯಂಡ ಜೋಯಪ್ಪ ಹುದಿ
9481770584

ಕಂಬದ ಮೇಲೆ ಮನೆ ಮಾಡಿ
ಬದ್ಕುವ ಕಾಲ ಬಂದೋತು
ಮಣ್ಣ್‌ನ ವಾಸನೆ ಮರ್ರೋತ್
ಕಕ್ಕಟ್ಟಿಲ್ಲೆ ಅಂಗಳಯಿಲ್ಲೆ
ರಂಗೋಲಿ ಬುಟ್ಟೋತ್
ನಾ ಯಾರೋ ನೀ ಯಾರೋ
ಸಂಬಂಧ ತುಂಡಾತ್
ಹತ್ತಿಕೂ ಯಂತ್ರ ಇಳೆಕೂ ಯಂತ್ರ
ಬಾಯ್ ಹೊಲ್ದಂಗೆ ಓಡಾಟ
ಮಾತ್ ಗೊತ್ತ್ ಆಡದೆ ಇದ್ದರೆ ।
ಬಾಯ್ಲ್ ಬಾಸೆ ಸತ್ತೋದೆ
ಬಾಗ್ಲ್ ಹಾಕಂಡ್ ಒಳಗೆ ಕುದ್ದರೆ
ಹೊರಗೇನಾರೂ ಗೊತ್ತಾಲೆ
ಅಡಿಗೆ ಇಲ್ಲೆ ಗಡಿಗೆಯಿಲ್ಲೆ
ಬಾಗ್ಲ್‌ಗೇ ಊಟ ಬಂದೋದೆ
ತಲೆಯೆತ್ತಿ ನೋಡಟಿಲ್ಲೆ ।
ಸುತ್ತ ಮುತ್ತ ಗೊತ್ತಿಲ್ಲೆ
ಮಾತೇ ಇಲ್ಲದ ಜಾಗೆ ಉಟ್ಟು ।
ಸೂಪರ್ ಮಾರ್ಕೆಟ್ ಹೆಸ್ರಾತ್
ಕಂಬದ ಮೇಲೆ ಮನೆ ಮಾಡಿ
ಬದ್ಕುವ ಕಾಲ ಬಂದೋತ್
ಮಣ್ಣಿನ ವಾಸನೆ ಮರ್ರೋತ್
ಎಮ್ಮೆ ಕುರಿ ಆಡ್ ದನ ಮೇಯೋದೆಂಗೆ ಗೊತ್ತಿಲ್ಲೆ
ಬತ್ತ ರಾಗಿ ಜೋಳ ಬೇಳೆ ಬೆಳೆವೆಂಗೆ ಗೊತ್ತಿಲ್ಲೆ
ರೈತ ಇದ್ದರೆ ಅನ್ನ ಉಟ್ಟು ।
ನಮ್ಮ ಮಕ್ಕಳಿಗೆ ಗೊತ್ತಿಲ್ಲೆ
ಅಪ್ಪನ ಮರ್ರೊತ್ತ ಅಮ್ಮನ ಮರ್ರೊ
ಮಕ್ಕ ಪೂರ ಮರ್ರೋದೊ
ಹಣ ಹಣ ಹಣತ್ತೇಕ ದೇಶ ಬುಟ್ಟ್ ಹಾರ್ರೋದೊ
ಇಂದ್ ಬಾವೊ ನಾಳೆ ಬಾವೊ
ಕಾದ್ ಕಾದ್ ಸುಸ್ತಾದೊ
ಸಾರ ಇಲ್ಲೆ, ಸತ್ವ ಇಲ್ಲೆ ರಸ ಹೀನ ಬದ್ಕ್
ಬದ್ಕ್‌ಲಿ ಇದ್ ಅನಿವಾರ್ಯತ
ಮೊನ್ನೆ ಯಾರೊ ಹೇಳ್ತಿದ್ದೊ. ❑

# ಅರೆಭಾಷೆ ಮತ್ತು ಸಂಸ್ಕೃತಿ ಪ್ರಸಾರಲಿ ಅವ್ವ



ಶ್ರೀಮತಿ ಶೈಲಜಾ ದಿನೇಶ್

ಭಾಷೆ ಅಂತ ಹೇಳ್ರೆ ನಾವು ಮಾತಾಡುವ ಮಾತ್ ಪದಗಳ್‌ಂದ ಕೂಡಿ ಇರುವ ಭಾಷೆ ಮನುಕುಲಕ್ಕೆ ಮಾತ್ರ ಸೀಮಿತಾಗಿ ಉಟ್ಟು. ಭಾಷೆನ ಬಗ್ಗೆ ಕುರುನ ವ್ಯಾಖ್ಯೆನ ಬರ್ದ್‌ಂವ ಪ್ಲೇಟೋ. ಅವನ ಪ್ರಕಾರ ಭಾಷೆ ಅಂತ ಹೇಳಿರೆ "ಧ್ವನಿ ಸಂಕೇತಗಳ್‌ಂದ ಮನುಷ್ಯನ ವಿಚಾರಗಳನ್ನು ಅಭಿವ್ಯಕ್ತಗೊಳಿಸುವ ಸಾಧನ" ಐಯ್‌ಸ್ಲರ್ ಅಂತ ಹಳು ಇನ್ನೊಬ್ಬ ಚಿಂತಕನ ಪ್ರಕಾರ "ಮನಸ್ಸಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿಯೇ ಭಾಷೆ" ಈ ವ್ಯಾಖ್ಯೆಲಿ ಸಂಕೇತ, ಉಚ್ಚಾರಣೆ, ನರ್ತನ, ಸಂಗೀತ ಎಲ್ಲಾ ರೀತಿಯ ಅಭಿವ್ಯಕ್ತಿನೂ ಭಾಷೆ ಒಳಗೊಂಡುಟ್ಟು. ಒಟ್ಟಾರೆ ಒಂದು ಸಮಾಜಲಿ ಇರುವ ವ್ಯಕ್ತಿಗ ಪರಸ್ಪರ ವ್ಯವಹಾರಕ್ಕೆ ಬೇಕಾಗಿ ಉಪಯೋಗ ಮಾಡುವ ಧ್ವನಿ ಸಂಕೇತಗಳ ವ್ಯವಸ್ಥೆನೇ ಭಾಷೆ. ನೀರು ಬೇಕು ಅಂತ ಸಂಕೇತಗಳ ಮೂಲಕ ಹೇಳ್ವಷ್ಟು ಸುಲಭಲಿ ಚಾ ಬೇಕು ಅಂತ ಹೇಳಿಕೆ ಸಾಧ್ಯ ಇಲ್ಲೆ. ಚಾಕ್ಕೆ ಸಕ್ಕರೆ ಹೆಚ್ಚು ಬೇಕು ಅಂತ ಹೇಳ್ವು ಇನ್ನು ಕಷ್ಟ ಹಂಗಾಗಿ ಭಾಷೆ ಒಂದು ವಿಚಾರನ ವಿನಿಮಯ ಮಾಡಿಕೆ ಇರುವ ಪರಿಣಾಮಕಾರಿ ಸಾಧನ.

ಬೇರೆ ಬೇರೆ ಭಾಷೆಗಳ ನಡುಲಿ ಇರುವ ವ್ಯತ್ಯಾಸನ ಗಮನಿಸಿರೆ ಭಾಷೆ ಕಲ್ಸಿದ್ರಂದ, ಕಲ್ತದ್ರಂದ ಬಂದದೆ. ಸಮಾಜದ ನೆರವುಂದ ಬಂದದೆ. ಅದ್ ದೈವದತ್ತವಾಗಿ ಬಂದದ್ದ್ ಅಲ್ಲ ಅಂತ ಹೇಳ್ವು ಸ್ಪಷ್ಟ ಆದೆ ಮಾನವ ಭಾಷೆ ಪ್ರಾಣಿ ಭಾಷೆಗಿಂತ ಭಿನ್ನವಾಗಿ ಉಟ್ಟು. ದ್ವೈತಭಾವ, ಉತ್ಪಾದಕತೆ, ಸಂಸ್ಕೃತಿ ವ್ಯಾಪಕತೆನ ಒಳಗೊಂಡು ಉಟ್ಟು. ಒಂದು ಸಾಮಾಜಿಕ ಕ್ರಿಯೆ ಆಗಿರುವ ಭಾಷೆನ ಅಳಿವು ಉಳಿವು ನಾವು ಬದ್‌ಕುವ ಸಮಾಜಕ್ಕೆ ಸೇರಿಟ್ಟು. ಮನುಷ್ಯ ತಾನು ರೂಪಿಸಿಕೊಂಡ ಭಾಷೆನ ಸಮಾಜದ ಏಳ್ಗೆಗೆ ಸಂಸ್ಕೃತಿನ ವಿಕಾಸಕ್ಕೆ ಬಳ್‌ಸಿದೆ. ಮಾತ್ ಕಲಿಯದ ಕೂಸುನ ಸಮಾಜಂದ ದೂರ ಮಾಡಿರೆ ಅದ್ ಭಾಷೆ ಕಲಿಯೊಕೆ ಸಾಧ್ಯ ಉಟ್ಟಾ?

ಹಿರಿಯರ್‌ಂದ ನಾವ್‌ಗೆ ರೂಪ, ಬಣ್ಣ, ಗುಣ, ಸ್ಥಿರ ಆಸ್ತಿ ಇವೆಲ್ಲ ಬಳುವಳಿಯಾಗಿ ಅಂತ ಹೇಳ್ರೆ ಕೆಲವು ಸಹಜವಾಗಿ ಮತ್ತೆ ಕೆಲವು ಕಾನೂನು ಪ್ರಕಾರ ಸಿಕ್ಕಿದೆ. ಆದರೆ ಭಾಷೆ ನಮ್ಮ ಹಿರಿಯವು ಮಾತಾಡ್ರೆ ಮಾತ್ರ ಸಿಕ್ಕಿದೆ. ನಮ್ಮ ಭಾಷೆನ ಹುಟ್ಟು, ವಿಕಾಸಗಳ ಬಗ್ಗೆ ಅರಿಯಿಲ್ಲದೇನೂ ನಾವು ಭಾಷೆನ ಅನುಕರಣೆಂದ ಕಲ್ತವೆ. ಕಾಲದ ಹರಿವುಲಿ ಭಾಷೆಲಿ ಎಷ್ಟೇ ಬದಲಾವಣೆಗಳಾದರೂ ವ್ಯಕ್ತಿ ಅದರನೇ ಅನುಸರಿಸಿದೆ. ಶಬ್ದ ಸ್ವೀಕಾರ ಮಾಡುವ ಗುಣ ಎಲ್ಲ ಭಾಷೆಲಿ ಸಹ ಸರ್ವೆ ಸಾಮಾನ್ಯ ಆಗಿ ಇದ್ದದೆ ಮತ್ತು ಅದ್ ಭಾಷೆನ ಪರಿವರ್ತನಾ ಶೀಲತೆಗೆ ಸಾಕ್ಷಿಯಾಗಿ ಇದ್ದದೆ.

ಭಾಷೆ ಸಮಾಜ ಮತ್ತು ಸಂಸ್ಕೃತಿ ಒಂದರ ಒಂದು ಅವಲಂಬಿಸಿಕೊಂಡ್ ಉಟ್ಟು. ಒಂದರ ಬುಟ್ಟು ಇನ್ನೊಂದಕ್ಕೆ ಅಸ್ತಿತ್ವಕ್ಕೆ ಸಿಕ್ಕುದ್ಲೆ. ಸಮಾಜ ಮತ್ತು ಸಂಸ್ಕೃತಿನ ಸ್ವರೂಪನ ಅಧ್ಯಯನ ಮಾಡಿಕೆ ಭಾಷೆ ಅಗತ್ಯ ಸಾಧನವಾಗಿ ಉಟ್ಟು. ಸಮಾಜ ಮತ್ತು ಸಂಸ್ಕೃತಿಗಳ ಬೆಳವಣಿಗೆಗೆ ಸಹ ಭಾಷೆನೆ ಮೂಲ ಆಧಾರ.

ಸಂಸ್ಕೃತಿ ಅಂತ ಹೇಳಿರೆ ಅದ್ ನಮ್ಮ ಅಂತರಂಗ ಒಂದು ಜೀವನ ವಿಧಾನ. ನಮ್ಮ ಆಚಾರ ವಿಚಾರನೆಲ್ಲ ಒಳಗೊಂಡಿರುವ ನಮ್ಮ ಸಮಾಜದ ತಳಪಾಯ. ಸುಮಾರು 400-500 ವರ್ಷಗಳ ಇತಿಹಾಸ ಇರುವ ಅರೆಭಾಷೆನ ಸಂಸ್ಕೃತಿ ಶ್ರೀಮಂತವಾಗಿ ಉಟ್ಟು. ಮದುವೆ ಜಂಬರ, ಬೊಜ್ಜದ ಕಾರ್ಯಕ್ರಮ, ಮುಡಿಪ್ಪು ಕುಪ್ಪ ಮಾಡ್ದು ಇತ್ಯಾದಿಗಳಲಿ ಅರೆಭಾಷೆ ಸಂಸ್ಕೃತಿನ ರೀತಿ ರಿವಾಜುಗಳ ಪರಿಪೂರ್ಣ ಜ್ಞಾನ ತಲೆಮಾರ್‌ಂದ ಮುಂದಿನ ತಲೆಮಾರ್‌ಗಳಿಗೆ ವರ್ಗಾವಣೆ ಆಕರೆ ಯುವ ಜನಾಂಗಲಿ ಹಿರಿಯರ್‌ಂದ ತಿಳ್ಕೊಳುವ ಆಸಕ್ತಿ, ಕುತೂಹಲ ಮತ್ತೆ ಆ ಜ್ಞಾನದ ಶಿಸ್ತನ ಆಚರಣೆಲಿ ಅಳವಡಿಸಿ ನಡವಳಿಕೆ ಆಗಿ ಪರಿವರ್ತಿಸಬೇಕಾದ ಅನಿವಾರ್ಯತೆ ಉಟ್ಟು. ಈ ಜವಾಬ್ದಾರಿನ ನಿರ್ವಹಣೆ ಮಾಡ್ವುದರಲಿ ಅವ್ವನ ಪಾತ್ರ ಬಹಳ ಮಹತ್ವ ಪಡೆದಿದೆ.

ಭಾಷೆ ಮತ್ತು ಸಂಸ್ಕೃತಿನ ಪ್ರಸರಣಾ ಕಾರ್ಯ ಅವ್ವನ ಮೂಲಕ ಕೂಸಿಗೆ ಗರ್ಭಾವಸ್ಥೆ ಹಂತಲೇ ಪ್ರಾರಂಭ ಆದೆ, ಮಾತ್ ಭಾಷೆನ ವಾಹಕ. ಅವ್ವ ಗರ್ಭದೊಳಗೆ ತನ್ನ ಕೂಸುನೊಟ್ಟಿಗೆ ಶಬ್ದ ಇಲ್ಲದೆ ಮಾತಾಡ್ದೆ. ಅವ್ವಂಗೂ ಕೂಸಿಗೂ ಮಾತಾಡಿದೆ ಸಮಯಲಿ ಮದ್ರುವತಿಗ ಬೇರ/ ಗರ್ಭಲಿ ಬೆಳೆಯುತಾವ ಕೂಸುನೊಟ್ಟಿಗೆ ಮಾತಾಡುವ ಮಾತ್ ಅದ್ ಬೇರೆ ಪ್ರಪಂಚಕ್ಕೆ ಕೇಳುವಂಥದಲ್ಲ. ಆ ಸಂವಾದ ಅನುಭವಕ್ಕೆ ಮಾತ್ರ ದಕ್ಕುವಂಥದ್ದು. ಅರೆಭಾಷೆ ಮಾತಾಡುವ

ಒಬ್ಬ ಅವ್ವ ಕೂಸುನೊಟ್ಟಿಗೆ ಅರೆಭಾಷೆಲಿ ಮಾತಾಡಿಕೆ ಸಾಧ್ಯ.

ಈ ಸಂದರ್ಭಲಿ ತೆನಾಲಿರಾಮನ ಕತೆ ಪ್ರಸ್ತುತ ಅಂತ ಅನ್ಸಿದೆ. ಆಸ್ಥಾನಕ್ಕೆ ಬಂದ ಬಹುಭಾಷಾ ಪಂಡಿತನ ಮಾತೃಭಾಷೆ ಯಾವ್ದು ಅಂತ ತಿಳಿಯಕೆ ತೆನಾಲಿರಾಮ ಆ ಪಂಡಿತ ಗಾಢ ನಿದ್ದೆಲಿರಿಕಾಕನ ಕೆಜಿನ ಹಕ್ಕಿ ಗರಿ ಹಾಕಿ ಕಚುಗುಳಿ ಮಾಡಿ ಅವಂಗೆ ಕಿರಿಕಿರಿ ಆಗಿ ನಿದ್ದೆನ ಮಂಪರ್‌ಲಿ ಶಬ್ದ ಉಚ್ಚಾರ ಮೂಡುವ ಹಾಂಗೆ ಮಾಡ್ದ. ಇದ್ ಮಾತೃ ಭಾಷೆನ ಗುಣ.

ಅವ್ವಂಗೆ ಹೊರ ಪ್ರಪಂಚಕೆ ಬಂದ ಕೂಸು ಯಾವ ಶಬ್ದ ಉಚ್ಚಾರಣೆ ಮಾಡಿರೂ ಅವ್ ಅವ್ವ ಅವ್ವ ಅಂತಾನೇ ಕೇಳ್ದೆ. ಜೋಗುಳ ಹಾಡಿಕಾಕನನೂ ಅದ್ ಅವ್ವನ ಭಾಷೆಲಿ ಇದ್ದದೆ. ಹಾಂಗಾಂಗಿ ಭಾಷೆನ ಬೆಳವಣಿಗೆ ಮತ್ತು ಪ್ರಸರಣಲಿ ಅವ್ವನೇ ಆದಿ ಅವ್ವನೇ ಹಾದಿ.

ಅವ್ವಂಗೆ ತನ್ನದೇ ಆದ ಕೆಲವು ವಿಶಿಷ್ಟ ಗುಣಗ ಒಳೊ. ಇದ್ ಪ್ರಕೃತಿ ಅವ್ವಂಗೆ ಮಾತ್ರ ಕೊಟ್ಟ ದೈವದತ್ತ ಕೊಡುಗೆ ಪ್ರತೀ ಅವ್ವನು ತನ್ನ ಕೂಸ್‌ಲಿ ಗರಿಷ್ಠ ಸಾಮರ್ಥ್ಯನ ಬೆಳ್ಸಿಕೆ ಉತ್ಸುಕಳಾಗಿ ಇದ್ದದೆ. ಸರಿಯಾದ ಮಾರ್ಗದರ್ಶನ, ಬೋಧನೆ, ಬೆಂಬಲ ಸಿಕ್ಕಿರೆ ಅವ್ವ ಮಕ್ಕಳಿಗೆ ಅತ್ಯುತ್ತಮ ಶಿಕ್ಷಕಿ ಆದೆ. ಅವ್ವನ ಆರ್ಥಿಕ, ಶೈಕ್ಷಣಿಕ, ಬೌದ್ಧಿಕ ಮಟ್ಟ ಅಥವಾ ಹಿನ್ನಲೆ ಮಕ್ಕಳಿಗೆ ಕಲ್ಸುವ ಇಚ್ಚೆಲಿ ಆಗಲಿ ಅಥವಾ ಕೂಸ್‌ನ ಕಲಿಕೆಲಿ ಆಗಲಿ ವ್ಯತ್ಯಾಸ ಮಾಡ್ತುಲ್ಲೆ.

ಈ ಇಡೀ ಪ್ರಬಂಧದ ಸಾರಾಂಶದ ಹಾಂಗೆ ಕಾಂಬ ಒಂದು ಸಣ್ಣ ಘಟನೆ ಈ ಸಂದರ್ಭಲಿ ಪ್ರಸ್ತುತ ಅಂತ ಅನ್ಸಿದೆ. ಕಛೇರಿ ಕೆಲ್ಸ ಮುಗ್ಸಿ ಬಾಕಾಕನ ಕೂಸ್ ದಿನಾಲೂ ಮನೆಲಿ ಕಾಯ್ತಾ ಇದ್ದದೆ. ಬಂದ ಕೂಡ್ಲೆ ಕೂಸ್‌ನ ಅವ್ವ ಬಂದೂರು ಸುಧಾರಿಸಿಕಣಲಿ ಅಂತ ಹೇಳಿ ಮನೆಯವು ಸುಳ್ಳು ಹೇಳುವೆ. ಆಗ ಕೂಸು ಹೇಳ್ದೆ ಇಲ್ಲೆ ನನ್ನ ಅವ್ವ ಬಂದ್‌ಟು ನಂಗೆ ಅವ್ವನ ಪರಿಮಳ ಬರ್‍ತಾ ಉಟ್ಟು ಅಂತ. ಅವ್ವನ ಇರುವಿಕೆನ ಪರಿಮಳಲಿ ಗ್ರಹಿಸುವ ಶಕ್ತಿ ನಿಷ್ಕಲ್ಮಶ ಮನಸ್‌ನ ಕೂಸ್‌ಲಿ ಮಾತ್ರ ಇದ್ದದೆ. ಕೂಸ್‌ನ ಐದು ವರ್ಷದೊಳಗಿನ ವ್ಯಕ್ತಿತ್ವ ನಿರ್ಮಾಣನೇ ಅದರ ಇಡೀ ಜೀವನದ ಅಡಿಪಾಯ. ಹಾಂಗಾಗಿ ಎಲ್ಲ ಅವ್ವಂದರೂ ಅರೆಬಾಷೆಲೇ ಮಾತಾಡಿ. ಅರೆಭಾಷೆನ ಬೇರುಗಳ ಇನ್ನಷ್ಟು ಆಳಕ್ಕೆ ತಕೊಂಡು ಹೋಗುವಂಗೆ ಮಾಡಿ, ಅರೆಭಾಷೆನ ಬೀಜಗಳ ಮನೇಲಿರುವ ಮಕ್ಕಳ ಮನಸ್‌ಲಿ ಮೊಳಕೆ ಒಡೆವಂಗೆ ಮಾಡಿರೆ ಮಾತ್ರ ನಮ್ಮ ಅರೆಭಾಷೆ ಕಾಲದ ಪ್ರವಾಹ್‌ಲಿ ಜೀವಂತ ಮತ್ಸ್ಯದ ಹಾಂಗೆ ಉಳಿಯೋಕೆ ಬೆಳೆಯೋಕೆ ಸಾಧ್ಯ ಉಟ್ಟು. ❑

---

ಕವನ

## ಒಡನಾಟ

–ಜಶ್ಮಿ ಚಿಂತು, ಕಲ್ಲುಮುಟ್ಲು
ಕಾಂತೂರು ಗ್ರಾಮ

ಒಂದೇ ಕರ್‌ಳ್‌ನ ಬಳ್ಳಿಗ ನಾವು
ಒಂದೇ ರಕ್ತ ನಮ್ಮ ಕಣಕಣಲಿ ಉಟ್ಟು
ನಿನ್ನ ಸುರುನ ಮಾತ್ ಕೇಳಿಕೆ
ಕಾಯಿತೊಳೆ ನಾನ್
ತಮ್ಮತೇಳಿ ಎರಡನೇ ಅಮ್ಮನಾದೆ ನಾನ್
ಕೈ ಹಿಡ್‌ದ್ ಆಡ್‌ಸಿದೆ ನಾನ್
ಅಕ್ಕಾ ತೇಳಿ ಬಾಯಿ ತುಂಬಾ ಕರ್‌ದೆ ನೀನ್
ನಿನ್ನ ಸುರುನ ಮಾತ್‌ಲಿ ಅಕ್ಕಾ ತೇಳುವ ಸಬ್ಧ
ನನ್ನ ಕಿವಿಗೆ ಕುಸಿ
ನಿನ್ನ ಆಟ ಪಾಠಕೆ ಜೊತೆಯಾದೆ ನಾನ್
ಒಟ್ಟ್-ಒಟ್ಟಿಗೆ ಆಡಿ ಬೆಳ್‌ದವು ನಾವ್,
ಬೆಳೆತ ಬೆಳೆತ ಪ್ರೀತಿನ ಸಂಬಂಧ
ಕಳಚಿ ಹೋತ್
ಅದೋ ನಾವು ಬರೀ ಮಾತ್‌ನ ಬಾಂಧವ್ಯ
ಹೆಸರ್‌ನ ಸಂಬಂಧ, ತಾರುಣ್ಯ ಕಳ್‌ದೇ
ಹೋತು ಒಂದೇ ಮನೆಲಿ

ನಾನ್ ಹೆಣ್ಣ್ ತೇಳಿ ಕಾದೆ ನೀನ್ ಮನೆಂದ
ಹೊರಗೆ ಹಾಕಿಕೆ
ಮದುವೆನ ಜವಬ್ದಾರಿ ತೇಳುವ ಕಟ್ಟ್‌ಪಾಡಲಿ
ನೀನ್ ತಮ್ಮನ ಕರ್ತವ್ಯ ಮುಗ್‌ಸಿಬಿಟ್ಟೆ
ಸುರುನ ಬಾಂಗೆ ಹೊರ ಹಾಕಿದೆ ನನ್ನ
ಮದುವೆನ ನೆಪಲಿ
ಕರ್‌ಳ ಬಳ್ಳಿ ತುಂಡಾತ್ ನಮ್ಮಲ್ಲಿ
ತಮ್ಮ ತೇಳುವ ಮಮತೆ
ಅಕ್ಕಾ ತೇಳುವ ಒಡನಾಟ
ಕಳ್‌ದೇ ಹೋತ್
ಅಮ್ಮನ ಮನೆ ತವರ್ ಮನೆ
ತೇಳಿ ಬದಲಾತ್
ತವರ್ ಮನೆಗೆ ಬಾತ್ ಅತ್ತಿಗೆ
ಅದೋ ನಾವು ದೂರದೂರ
ಕಳಚಿ ಹೋತ್ ನಮ್ಮ
ಬಾಲ್ಯದ ಎಲ್ಲಾ ಸಂಬಂದ.... ❑

# ಉಬರ್

-ಮನೋಜ್ ಕುಡೆಕಲ್

ಹಣೆಗದ್ ಬೊಟ್ಟು ಮುಡಿಗದ್ ಹೂವು
ನೋಡಿಕೆ ಪೊರ್ಲಿತ್ತ್
ಕೆಬಿಲದ್ ಜುಂಕಿ ಕಾಲ್‌ಲಿ ಕಾಲ್ಗೆಜ್ಜೆ
ಹಬ್ಬಿದ್ ತೂಗ್‌ವ ಹೂಬೊಳ್ಳಿನ ಹಾಂಗಿತ್ತ್...

ಕೊಣ್ದರೂ ಬಿಚ್ಚದ ಬೆಳ್ಳಂಗೆ ಪಂಚೆಗ
ಮುಂಡಾಸ್ ಬಿಗ್ದರೆ ಗಡ್ದ್ ಕಾನ್ತಿತ್ತ್...!
ಹುರಿಮೀಸೆ ಚಿರ್‌ಂಬಿ ಎದೆನದ್ ಉಬ್ಬುಸಿರೆ
ನಾವ್ಗೆ ಎದ್‌ರಕೆ ನಿಲ್ಲವ ಯಾರಿತ್ತ್...?

ಮೂಡದ ಗಟ್ಟಕೆ ಪಡ್ವದ ಸಮುದ್ರಕೆ
ಅಡ್ಡಕ್ಕೆ ಸುಳ್ಯ ಕೊಡಿಯಡಿನಾಂಗಿತ್ತ್.
ನಮ್ಮದೇ ವೇಸಲಿ ನಮ್ಮದೆ ಬಾಸೆಲಿ
ಪೂಮಲೆ ಬೈಲ್ ಗುಡ್ಡಲಿ ಕೊಣೆತಿತ್ತ್

ಹಳ್ತೊಂದ್ ಹೋಕೆ ಹೊಸ್ತೊಂದ್ ಬಾಕೆ
ಹಿರಿತಲೆಗೇಳ್ವ ಗುಟ್ಟ್‌ಗ ನೂರಿತ್ತ್.... !
ಗುಂಪುಲಿ ಮನೆಗ ನೊಡುಲೊಂದು ಬಾಮಿ
ಮಾತಾಡಿಕೆ ನೀರೆಳಿವ ನವನಗ ಇತ್ತ್.
ಹೀಂಬೂತುನ ಹರ್ಟೆ ಚಾವಡಿಲಿ ಪಟ್ಟಾಂಗ
ಅಂದೆಲ್ಲ ಸರ್ಕೀಟ್‌ಗೆ ಜೈಲ್ದಾರಿನೆ ಲಾಯ್ಕಿತ್ತ್.

ಹೆಗಲ್‌ಗೆ ಬೆಡಿನು ಕಾಲಡಿ ಕಾಳನು ಬೊಳ್ಳುನು
ಎಡೆ ಅಮಾಸೆ ಇರತಿತ್ತ್
ಗಾಳಕೂ ಬಲೆಗೂ ಗೋಂಚಿಕೆ ಕೂಳಿಗೆ ಏಪೆಗೆ
ಪುಣಿಕರೆ ಕಣಿಗ ನೆರೆಕರೆ ಹಳ್ಳಗ ಕಾಂನ್ತಿತ್ತ್
ಹಬ್ಬಕೆ ದೆವ್ವಕೆ ಹಿಂಡಿಂಡ್ ಬಾವ ನೆಂಟ್ರುಗ
ತಿಂಗಳ ಮಟ್ಟ್‌ಗೆ ಗಮ್ಮತ್‌ಗಿರತಿದ್ದೋ
ಓಟದ ಹಲಗೆನ ಕೋಣಗ ಕಟ್ಟದ ಕೋಳಿಗೆ
ಪೂಕರೆ ಗದ್ದೆಗೆ ಓಂಕಂಡ್ ನಡೆತಿದ್ದೊ.
ಮೇಳದ ಆಟಗ ಅಲ್ಲಲ್ಲಿ ತಾಳಮದ್ದಳೆಗ
ಮೊನ್ಸರ ಮನ್ಸ್‌ಗೆ ಮುಲಾಮುನಾಂಗಿತ್ತ್.

ಈಗೆಲ್ಲ
ಕೈಗೊಂದ್ ಮೊಬೈಲ್ ಹತ್ತ್ಯೋಕೆ ಕಾರ್ಬೈಕ್
ನಮ್ಮೊಳೆಗೆನ ಗುರ್ತಕೆ ಬೇಲಿನಾಂಗಾತ್
ಪೇಟೆನ ಪಾಲಾದ ಮನೆವ್ಕೆ ಊರುಲಿ
ಮನ್ಸೊಬ್ಬರ ಗುರ್ತನೆ ಇಲ್ಲದಂಗಾತ್

ಇಂಗ್ಲೀಷ್ ಬಾಸೆನ ಬೊಲ್ಲದ ಶಾಲೆಗ
ಲಂಡನ್ ಕೋಟೆಗೆ ಮೋಟೆನ ಹಾಂಗಾತ್
ಅರೆಬಾಸೆನ ಆಸೆ ಮರ್ತೋರ್‌ತ್ ನಮ್ಮೊಳೆಗೆಲ್ಲ
ಬದಲಾದ ಬಣ್ಣಗ ಕಳ್ದೋವ ಗಳ್ಗೇಲಿ
ಕಾಯ್ಪೊಜ್ಜಿ ಪುಂಡಿ ಬೊಡ್ಡಿಟ್ಟ್ ಮೂಡೆ ಮಾಯಾತ್
ಸಾಂತಾಣಿ ಹಪ್ಪಳ ಮಾಂಬಳ ಎಲ್ಯೋತ್

ಟೀವೀನೋ ಮೊಬೈಲೋ ಮತ್ತೊಂದ್ ಸುಡ್ಗಾಡೋ
ಕತ್ತಲೆಗೆ ನಾವ್ ಒಟ್ಟಿಗೆ ಕುದ್ದ್ ಮಾತಾಡ್ದೇ ಮರ್ತೋರ್‌ತಲ
ಮಾತ್‌ಕತೆ ಕಡಿಮಾಗಿ ಅಪ್ಪಮಕ್ಕಳ ನಡುಲೆ
ಒಚ್ಚುವ ಬೊಚ್ಚುವ ಸೇತುವೆ ಒಂದಾಗುಟು

ಈಗೀಗ
ಜನರ ಮಾತ್‌ನ ಪಾಕಕೆ ಒಗ್ಗರ್ಣೆನೇ ಇಲ್ಲೆ
ಪಟ್ಟಾಂಗದ ಗೈಪೋ
ಥೋ ಮೊಡ್ಡಿನ ಹಂಗಾಗುಟು

ಹೌದು ಮಳೆ ಜೋರು ಹೊಯತುಟ್ಟು...
ನಾವ್ರೋ
ಹತ್ತ್ಯೋಳೋ ಉಬರ್‌ನ ನಾವು ಕಣ್ಮುಚ್ಚೀನೆ
ಫಾರಿನ್ಸ್‌ನ ಕೊಳ್‌ಂಜೀಗೆ ಹಂಞಂಞನೇ..
ಬುಟ್ಟೋಗೊಳ ಪಂಡೇ ನಮ್ಮ ಹಳ್ಳನನೇ
ಹೌದು
ನಮ್ಮದೆ ಬಾಸೆನ ಸಂಸ್ಕೃತಿ ಸುಗ್ಗಿನ
ಈ ಪೊರ್ಲುನ ದೊಡ್ಡಹಳ್ಳನನೇ...

ಇನ್ನೂ ಜಡಿಹಿಡ್ದ್ ಹೊಯ್ಕಂಡೆ ಉಟ್ಟು
ಈ ಕಾಲದ ಮಳೆ ಕೋಲದ ಮಳೆ ಪೇಸನ್ಸ್‌ನ ಮಳೆ...
ಮೊನ್ಸರ ಮನ್ಸ್‌ನ ಹುಳ್ಳಂಗೆ
ತಿರ್ಗ್‌ಸಿದ ಮಳೆ

❑

# ಗೌಡ ಸಮಾಜದ ಅರೆಬಾಸೆ ಅಕ್ಷರ ಸಂಸ್ಕೃತಿಗೆ 50 ರ ಸಂಭ್ರಮ



ಬರ್ದೊವು: ಡಾ. ಪುರುಷೋತ್ತಮ ಕೆ.ವಿ.
ಕರಂಗಲ್ಲು

ಕೊಡಗು ಮತ್ತು ದಕ್ಷಿಣ ಕನ್ನಡದ ಗೌಡ್ರ ಅರೆ ಬಾಸೆ ಅಕ್ಷರ ಸಂಸ್ಕೃತಿಗೆ 50 ರ ಸಂಭ್ರಮ ತೇಳ್‌ರೆ ಹೆಚ್ಚಿನವ್ಕೆ ಇದೆಂತತೇಳಿ ಆಶ್ಚರ್ಯ ಆದು. ಖಾಲಿ ಮನೆಮಾತ್ ಮಾತ್ರ ಆಗಿದ್ದ ಅರೆಬಾಸೆ (ಗೌಡ ಅರೆಕನ್ನಡ)ನ ಬರವಣಿಗೆ ರೂಪಲಿ 50 ವರ್ಸ ಹಿಂದೆ ಹೊರತಂದ ಗೌರವ ಮತ್ತೆ ಕೀರ್ತಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು ಇದ್‌ಕ್ಕೆ ಸಂದದೆ.

ಐವತ್ತು ವರ್ಸ ಹಿಂದೆ, ಅಂದರೆ 1970ಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು ಇದರ ಅಧ್ಯಕ್ಷರಾಗಿದ್ದ ಶ್ರೀ ಪಡ್ಡಂಬೈಲು ವೆಂಕಟರಮಣ ಗೌಡ್ರು ಇವರ ಸಂಪಾದಕತ್ವಲಿ **'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ'** ಎಂಬ ಎರಡನೇ ನೆಂಪುನ ಸಂಚಿಕೆ ಹೊರಬಾತ್. ಇದ್ಕೆ ಮುಂದೆ 1968ಲ್ಲಿ ಹೊರ ಬಂದ ಸುರುನ ಸಂಚಿಕೆ ನಂಗೆ ಸಿಗದ ಕಾರಣ, ಅದರ್ಲಿ ಏನಿತ್ತ್ ಅಂತ ಗೊತ್ತ್ಲೆ. ಅದ್ರೂ 1970ಕ್ಕೆ ಮುಂದೇ ನಮ್ಮ ಅರೆಬಾಸೆ ಗೌಡ್ರಿಗೆ ಭಾಷೆ, ಸಂಸ್ಕೃತಿ, ಆಚಾರ ವಿಚಾರಗಳ ಬಗ್ಗೆ ಕಾಳಜಿ ಇದ್ದಕಾರಣ ಅದರ ಮುಂದೆ ನಮ್ಮ ಜಾತಿ ಮಕ್ಕಳಿಗೆ ಮುಂದುವರ್ಸಿಕಂಡ್ ಹೋಕೆ ಅವು ಅಡಿಪಾಯ ಹಾಕಿ ಕೊಟ್ಟೊಳೊ.ಇದಲ್ಲದೆ 1970 ನಮ್ಮ ಗೌಡ್ರಿಗೆ ಇನ್ನೊಂದು ಅದೃಷ್ಟದ ವರ್ಷ, ಯಾಕೆಂತೇಳ್ರೆ ಇದೇ ವರ್ಸ ಪ್ರೊ.ಕೋಡಿ ಕುಶಾಲಪ್ಪ ಗೌಡ್ರು, "ಗೌಡ ಕನ್ನಡ'ದ ಬಗ್ಗೆ ಇಂಗ್ಲೀಷ್‌ಲಿ ಸಂಶೋಧನೆ ಪ್ರಬಂದ ಬರ್ದ್, ಅಣ್ಣಾಮಲೈ ವಿಶ್ವವಿದ್ಯಾಲಯಕ್ಕೆ ಸಲ್‌ಸಿ ಡಾಕ್ಟರೇಟ್ ಪದವಿ ಪಡ್ದೊ. ಈ ಮೂಲಕ ಸುಮಾರು 400 ವರ್ಸಗಳ ಇತಿಹಾಸ ಇರ್‍ವ ಅರೆಬಾಸೆನ ಪೊರಿನ್‌ನ ಬಾಸೆ ವಿಜ್ಞಾನಿಗಳಿಗೆ ಪರಿಚಯ ಮಾಡಿಕೊಟ್ಟೊ. ಹಿಂಗೆ ಬಾಸೆ ಕಟ್ಟಕೆ ಗೋಡೆಗೆ ಅಡಿಪಾಯ ಹಾಕಿದೊವು ಕೋಡಿಯವು.

ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧಿಕೃತ ಆಗಿ ಸುರು ಆಗಿ ನಾಡ್ತ್ 2020 ಮೇ ತಿಂಗಳಿಗೆ 8 ವರ್ಸ ಆದೆ. ಮೊದಲ ದೊಡ್ಡ ಮಟ್ಟದ ಸಮ್ಮೇಳನ 2 ಮಾರ್ಚ್ 2019ಲ್ಲಿ ಸುಳ್ಯಲಿ ನಡ್ತ್. ಎರಡೇ ದೊಡ್ಡ ಸಮ್ಮೇಳನ 23 ಫೆಬ್ರವರಿ 2020ಲ್ಲಿ ಸಿದ್ದಾಪುರದ ಅಲೂರ್‌ಲಿ ನಡ್ತ್. ಮೊದಲ ಸಮ್ಮೇಳನದ ಅಧ್ಯಕ್ಷರಾದ ಕೆ.ಆರ್. ಗಂಗಾಧರವ್ರು ಅರೆಬಾಸೆ ಸಾಹಿತ್ಯದ ಹೆಜ್ಜೆ ಗುರ್ತಗಳ ವಿವರ ಮಾಡಿ ತಿಳ್ಸಿಲೊ.ಇದ್ 'ಪಸ್‌ಲ್' ಎಂಬ ಹೆಸ್‌ರ್‌ನ ನೆಂಪಿನ ಪುಸ್ತಕಲಿ ಪ್ರಕಟ ಅವುಟು. ಈಗ ಎರಡ್ನೇ ಸಮ್ಮೇಳನದ ಈ ನೆಂಪುನ ಪುಸ್ತಕಲಿ ನಾನು ಮತ್ತೆ ನೆನ್‌ಪಿಸಿಕ ಹೊರ್ಟ ವಿಷಯ 1970ಲ್ಲಿ ಪ್ರಕಟ ಆದ 'ಕೊಡಗು ಮತ್ತು ದಕ್ಷಿಣ ಕನ್ನಡ' ಗೌಡ ಸಮಾಜದ ಸಂಸ್ಕೃತಿ ಎಂಬ ನೆಂಪುನ ಪುಸ್ತಕದ ಬಗ್ಗೆ. ಈ ಪುಸ್ತಕ ಬಗ್ಗೆ ನಂಗೇ ಅತೀ ಹೆಮ್ಮೆಯಾಕೆತೇಳ್ರೆ, ನಾ ಅರೆಬಾಸೆನ ಅಕ್ಷರ ರೂಪಲಿ ಪಸ್ಟ್‌ಗೆ ನೋಡ್ದ್ ಈ ಪುಸ್ತಕಲಿ. ಈ ಪುಸ್ತಕ ಹೊದ್ಲಟ್ಟ ಶ್ರೀ ಭವಾನಿಶಂಕರ್ ಇವರ ಅರೆಬಾಸೆಲಿ ಬರ್ದ ಪ್ರಾರ್ಥನೆಂದ ಸುರು ಆದೆ. ಇದರ್ಲಿ ಒಟ್ಟು 4 ಭಾಗ ಉಟ್ಟು. ಒಂದನೇ ಬಾಗಲಿ ಗೌಡ ಸಮಾಜದ ಚಾರಿತ್ರಿಕ ವಿಷಯ, ಎರಡನೇ ಬಾಗಲಿ ಗೌಡ್ರ ಕಟ್ಟುಕಟ್ಟಳೆ ಮತ್ತು ಸಾಮಾಜಿಕ ಜೀವನ, ಮೂರ್ನೆ ಬಾಗಲಿ ಗೌಡ ಸಮಾಜದ ರೂಪುರೇಖೆಗಳ ಬಗ್ಗೆ ಉಟ್ಟು ಮತ್ತು ನಾಲ್ಕನೇ ಭಾಗಲಿ ಧನಸಹಾಯ ಮಾಡಿದವರ ಹೆಸ್‌ರ್ ಉಟ್ಟು.

ಮಾಕೇನಹಳ್ಳಿ ದೊಡ್ಡಮನೆ ದೊಡ್ಡಪ್ಪ ಗೌಡ್ರು 'ಗೌಡ ಸಮಾಜ ಗೌಡ ರಾಜ್ಯ' ಎಂಬ ಹೆಸ್‌ರ್‌ನ ಬರವಣಿಗೆಲಿ, ಆಧಾರ ಸಹಿತ (ಶಾಸನ) ಗೌಡ್ರ ಇತಿಹಾಸನ ಬರ್ದೊಳೊ. ಇದ್ ಕನ್ನಡ ಬಾಸೆಲಿ ಉಟ್ಟು. ಶ್ರೀ ಪೆರಿಯಾನ ಪೂವಯ್ಯನವ್ರು 'ಗೌಡ ಸಂಸ್ಕೃತಿಯ ಅವಲೋಕನ' ಎಂಬ ತಲೆಬರಹಲಿ ಸಂಸ್ಕೃತಿ ಬಗ್ಗೆ ಚರ್ಚೆ ಮಾಡೆಳೊ. ಶ್ರೀ ಪೂಜಾರಿರ ಮೊಣ್ಣಪ್ಪ ನವ್ರು ಗೌಡರ ಪೂರ್ವ ಪರಿಚಯ ಎಂಬ ಶೀರ್ಷಿಕೆಲಿ ಗೌಡ್ರ ಮೂಲದ ಬಗ್ಗೆ ಚರ್ಚೆ ಮಾಡೆಳೊ. ಶ್ರೀ ಡಿ ಎನ್ ಕೃಷ್ಣಯ್ಯನವ್ರು 'ಕೊಡಗಿನಲ್ಲಿ ಗೌಡ ಜನಾಂಗದವರು' ಎಂಬ ಕನ್ನಡ ಲೇಖನಲಿ ಕೊಡಗ್‌ನ ಗೌಡ್ರ ಇತಿಹಾಸ, ಸಂಸ್ಕೃತಿ, ಪದ್ಧತಿ ಮತ್ತೆ ಭಾಷೆ ಬಗ್ಗೆ ಬರ್ದೊಳೊ. ಗೌಡ ಜನರ ಕಟ್ಟುಕಟ್ಟಳೆಗಳ ಬಗ್ಗೆ ದಿ.ಶ್ರೀ ಕೊಳಂಬೆ ಪುಟ್ಟಣ್ಣ ಗೌಡ್ರು ವಿವರವಾಗಿ ಬರ್ದೊಳೊ. ಹುಟ್ಟಿಂದ ಸಾವಿನ ತನಕದ ಕಟ್ಟುಕಟ್ಟಳೆಗಳ ಬಗ್ಗೆ ಇಲ್ಲಿ ಮಾಹಿತಿ ಉಟ್ಟು. ಶ್ರೀ ಕೂಟುಗೋಡು ಪದ್ಮಯ್ಯ ಗೌಡ್ರು ಹಾಲುವೊಕ್ಕಲು ಮಕ್ಕಳ (ಗೌಡ್ರ) ಕೆಲವು ಆಚರಣೆಗಳ ಬಗ್ಗೆ ಸಿಕ್ಕಿದ ಮಾಹಿತಿಗಳ ಸಂಗ್ರಹ ಮಾಡಿ ಬರ್ದೊಳೊ. ಇವರ ಪ್ರಕಾರ ಗೌಡ್ರು ಅಂದರೆ ಹಾಲು ವೊಕ್ಕಲು ಮಕ್ಕಳು. ನಮ್ಮ ಕೆಲವು ಪದ್ಧತಿಗಳ ಬಗ್ಗೆ ಡಾ. ಗುಡ್ಡೇರ ಪಿ ಗಣಪತಿ ಕೊಡಗು ಇವ್ರು ಬರ್ದೊಳೊ. ಗೌಡ ಸಮಾಜದ ಮಕ್ಕಳ ಬಾಲ್ಯ ವಿಧಿಗಳ ಬಗ್ಗೆ ಮತ್ತು ವಿವಾಹ ಪದ್ಧತಿಗಳ ಬಗ್ಗೆ ಶ್ರೀ ಎಂ.ಗಂಗಾಧರ್, ಮಂಡೆಕೋಲು ಇವು ಕನ್ನಡಲಿ ಬರ್ದೊಳೊ.ಈ ಪುಸ್ತಕಲಿ ಅರೆಬಾಸೆಗೆ ಒಂದು ದೊಡ್ಡ ಗೌರವಂದ್

ಕೊಟ್ಟಿದ್ ಶ್ರೀ ಹೊದ್ದೆಟ್ಟಿ ಭವಾನಿ ಶಂಕರವು. ಇವು ಇಡೀ ಗೌಡ್ರ ಮೊದುವೆನ ಎಲ್ಲಾ ಪದ್ಧತಿಗಳ ಪೂರ್ಣರೂಪದಲಿ ಅರೆಭಾಷೆಲಿ ಬರ್ದೋಳೊ. ಹಾಸ್ಯ ಮಿಶ್ರವಾಗಿ ಅರೆಭಾಷೆ ಬರ್ದ ಅವರ ಶೈಲಿ ಭಾರೀ ಲಾಯಿಕ್ ಉಟ್ಟು. ಡಾ. ಗುಡ್ಡೇರ ಪಿ.ಗಣಪತಿಯವು 'ಸತ್ತವಂಗೆ ನಡೆಸುವ ಸಂಸ್ಕಾರಗಳು (ಕೊಡಗಿನಲ್ಲಿ ನಡೆಸುವ ಪದ್ಧತಿಗಳು)' ಎಂಬ ಕನ್ನಡಲಿ ಬರ್ದ ವಿಷಯಲಿ ಇರೋದು ಮನುಷ್ಯನ ಸಾವಿನ ನಂತರದಎಲ್ಲಾ ವಿಧಿವಿಧಾನಗಳ ಬಗ್ಗೆ ಉಟ್ಟು. ಹಂಗೇ ಶ್ರೀ ಶಿವರಾಮ ಮೂಲೆಮಜ್ಲು ಇವು ದಕ್ಷಿಣ ಕನ್ನಡಲಿ ಗೌಡ್ರು ಸತ್ತ ಮೇಲೆ ಮಾಡುವ ಸಂಸ್ಕಾರಗಳ ಬಗ್ಗೆ ಕನ್ನಡಲಿ ಬರ್ದೋಳೊ. ಹೆಣ್ ತಕ್ಕಕೊಡುವ ಹಾಡ್, ಸೋಬಾನೆ ಹಾಡ್, ಅರಶಿನ ಹಾಕ್‌ಕನ ಹೇಳುವ ಹಾಡ್ ಇವೆಲ್ಲ ಕನ್ನಡಲೇ ಉಟ್ಟು. ಬಳ್ಳಿ ಬಂಗಾರದ ಹಾಡ್, ದಿಬ್ಬಣ ಹೋಕನ ಹೇಳುವ ಸೋಬಾನೆ, ಧಾರೆ ಆಕನ ಹೇಳುವ ಪೊದ್ದು, ಹೂ ಮುಡ್ಸಿಕನ್ ಹೇಳುವ ಪೊದ್ದು, ಬಾಗಿಲು ತಡೆಕನ ಹೇಳುವ ಪೊದ್ದು, ಹಸೆಗೆ ಕರೆವ ಹಾಡ್, ತಲೆಬಾಚ್‌ಕನ ಹೇಳುವ ಹಾಡ್ ಎಲ್ಲಾ ಇಲ್ಲಿ ಉಟ್ಟು. ಇವೆಲ್ಲ ಕನ್ನಡಲೇ ಉಟ್ಟು. ಈಗ ಸಹ ಈ ಎಲ್ಲಾ ಹಾಡ್‌ಗಳ ಅರೆಭಾಷೆ ಮಾತಾಡೊವು ಸಹ ಕನ್ನಡಲೇ ಹೇಳುವೆ.

ಗೌಡ್ರು ಆಚರುವ ಹಬ್ಬ ಹರಿದಿನಗಳ ಬಗ್ಗೆ ಶ್ರೀ ಮೂಲೆ ಮಜ್ಲು ಸೋಮಣ್ಣನವು ಕನ್ನಡಲಿ ವಿವರ ಮಾಡಿ ಬರ್ದೋಳೊ. ಯುಗಾದಿ ಹಬ್ಬ, ಬಿಸುಸಂಕ್ರಮಣ, ಬಿತ್ತ್ ಹಾಕುವ ಪದ್ಧತಿ, ನೇಜಿ ನೆಡಿಕೆ ಸುರುಮಾಡ್‌ಕನ, ನೇಗಿಲ್ ಪೂಜೆ, ಕೈಲ್ ಮುಹೂರ್ತ, ಕಾವೇರಿ ಸಂಕ್ರಮಣ, ಹುತ್ತರಿ, ಕೆಡ್ಡಸ ಈ ಎಲ್ಲಾ ಹಬ್ಬಗಳ ಆಚರಣೆ ಬಗ್ಗೆ ಮಾಹಿತಿ ಉಟ್ಟು. ಕೂಡಕಂಡಿರ ಎ. ಪೊನ್ನಪ್ಪನವು 'ತಾಟದಾರಿಕೆ' ಎಂಬ ಅರೆಭಾಷೆ ಪದ್ಯನ ಇದರ್ಲಿ ಬರ್ದೋಳೊ. ಹೊದ್ದೆಟ್ಟಿ ಭವಾನಿಶಂಕರವು ಈ ಸಂಚಿಕೆಲಿ ಹೀರೊ ಆಗಿಳೊ. ದ್ಯಾವನ ಗದ್ದೆ ಗೋರಿ, 'ಅಜ್ಜಿ ಸಾಂಕಿದ ಮಂಜ......ಅಕಿಲೆ, 'ಜೋಮಣ್ಣನ ಕೋಳಿಕಟ್ಟ' 'ಅಂಗರನ ಪಂಜಿ ಬೋಂಟೆ (ತುಳು)''ದಾಯೆ ಪೋಡಿಪಯ (ತುಳು)' ಪೊದ್ದುಗ ಅಂದ್‌ಂದ ಇಂದ್‌ತನಕ ಜನರ ಬಾಯಿಲಿ ಕುಣಿತ ಉಟ್ಟು. ಅವು ಬರ್ದ 'ಒಗ್ಗಟ್ ಜನರ್ಲಿ ಎಲ್ಲಿಟ್ಟು?' ಪದ್ಯವೂ ಅಷ್ಟೇ ಒಳ್ಳೆದುಟ್ಟು. ಪೋಟೆಗೂಡೆನ ಮೊದುವೆ ಇಡೀ ಅರೆಭಾಷೆ ಕವನಗಳ್‌ಲಿ ಭಾರೀ ಖುಷಿ ಕೊಡುವ, ಹಾಡಿಕೂ ಅಷ್ಟೇ ಲಾಯಿಕ್ ಆಗಿ ರಚನೆ ಆದ ಪೊದ್ದು.ಬಹುಶಃ ಈ ಕಾರಣಕ್ಕೆ ಆಲೂರು ಅರೆಭಾಷೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಅವರ ಹುಡಿಕ್‌ಕಂಡ್ ಬಂದದ್ ಅಂತ ಕಾಡದೆ. ಅರೆಭಾಷೆಲಿ ಮೊದಲು ಚುಟುಕುಗಳ ಬರ್ದೊವು, ಶ್ರೀ ಕುಲ್ಲಚನ ಕಾರ್ಯಪ್ಪ ಇವು. ಅವರ ಚುಟುಕುಗ ಹಾಸ್ಯ ವಿಡಂಬನೆ ಜೊತೆಗೆ ಪ್ರಾಸಬದ್ಧ ಆಗಿ ಉಟ್ಟು. ಉದಾಹರಣೆಗೆ

**ತಾತ್ಸಾರ ಸಲ್ಲದು**
ಅಪ್ಪಂಗೆಜರ,
ಅವ್ವಂಗೆಕುರ
ನಂಗೆಮ್ಮೆ ಪಾರ
ಚಾಂಪಂಗೆ ದನಪಾರ
ಚಾಮೆವ್ವಂಗೆ ಮಕ್ಕಳ ಪಾರ
ನಿಮಿಗೆ ಬಾಳ ಸಸರಾ

**ಗಂಡೊಬ್ಬನ ವ್ಯಕ್ತಿಚಿತ್ರ**
ಹೊಟ್ಟೆದೂಮಣ್ಣ
ಕೈಕಾಲ್ ಸಣ್ಣಣ್ಣ
ಬೊಕ್ಕಬಾಯಿ ದೊಡ್ಡಣ್ಣ
ಹರ್‌ಕ್‌ಲಿ ಬಾಯಿ ಕಿಟ್ಟಣ್ಣ

ಇದೇ ಸಂಚಿಕೆಲಿ ತೊತ್ತಿಯನ ಮಂದಣ್ಣ ಇವು ಅರೆಭಾಷೆಲಿ ಬರ್ದ 'ಗೌಡ ಸಂಸ್ಕೃತಿ ಮತ್ತು ಒಗ್ಗಟ್ಟು' ನಮ್ಮ ಜನಾಂಗಕ್ಕೆ ದಾರಿದೀಪ ಆಗುವ ಬರಹ. ಶ್ರೀ ಅಂಬೆಕಲ್ಲು ಪುಟ್ಟಣ್ಣ ಗೌಡ್ರು (ಪಿ ಜಿ ಅಂಬೆಕಲ್ಲು) 'ನಮ್ಮ ಭಾಷೆ' ಎನ್ನುವ ಅರೆಭಾಷೆಲಿ ಬರ್ದ ಲೇಖನ ನಮ್ಮ ಭಾಷೆ ಬಗ್ಗೆ ಒಳ್ಳೆ ಅಭಿಪ್ರಾಯ ಮೂಡ್ಸಿದೆ. ಇದಲ್ಲದ ಈ ಪುಸ್ತಕದ ಕೊನೆಗೆ ನಮ್ಮ ಅಗಲಿದ ಗೌಡ ಜನಾಂಗದ ಹಿರಿಯ ಸಾಧಕರ ವಿವರ ನೀಡಿ, ಅವ್ರಿಕೆ ಗೌರವ ಸಲ್ಲಿಸಿಳೊ.

ಒಟ್ಟ್ ಹೇಳ್ವಾದರೆ 1970ಲ್ಲಿ ಪ್ರಕಟ ಆದ ಈ ನೆಂಪಿನ ಸಂಚಿಕೆ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ್ರ ಇತಿಹಾಸ, ಸಂಸ್ಕೃತಿ, ಆಚಾರ ವಿಚಾರ ಭಾಷೆಗಳ ತಿಳ್ಸುವ ಆಕರಗ್ರಂಥ ಆಗಿ ಮೂಡಿ ಬಂದುಟು. ಆದರೂ ಅರೆಭಾಷೆ ಬಳಕೆ ಒಂದು ಥರ ಅಭಿಪ್ರಾಯ ಹಾಕಿ ಕೊಟ್ಟೊಳೊ ಇದ್ದೆ. ಕ್ಷಮಿಸಿದ ಎಲ್ಲಿವ್ರೂ ನಾವು ಆಭಾರಿಗ.(ಈ ಲೇಖನಲಿ ಆದಷ್ಟ್ ಮಹಾಪ್ರಾಣದ ಬಳಕೆ ಕಡಿಮೆ ಮಾಡೆಳೆ, ಕಾರಣ, ವಿದ್ವಂಸರ್‌ಗಳ ಒಟ್ಟು ಅಭಿಪ್ರಾಯ ಏನೆಂತೇಳ್ರೆ ಅರೆಭಾಷೆಲಿ ಮಹಾಪ್ರಾಣ ಬಳಕೆ ಕಡಿಮೆ ಉಟ್ಟೊಂತ) ಆದರೆ ಕೆಲವು ಕಡೆ ಮಹಾಪ್ರಾಣ ಇಲ್ಲದೆ ಬರ್ದರೆ ಅದ್ಕೆ ಅಷ್ಟೊಂದು ಅರ್ಥ ಬಾದುಲೆ ಅಂತ ನನ್ನ ಅನಿಸಿಕೆ)

ವಿಳಾಸ: ಡಾ. ಪುರುಷೋತ್ತಮ ಕೆ.ವಿ
ಅಸೋಸಿಯೇಟ್ ಪ್ರೊಫೆಸರ್,
ಪೊಂಪೈ ಕಾಲೇಜು, ಐಕಳ,
ಕಿನ್ನಿಗೋಳಿ, ಮಂಗಳೂರು, ದ.ಕ.–574141.
ಫೋನ್: 9448216070.



## ಕತೆ ಕೇಳೋಕಾ? ದೊಡಪನತ್ರ ಪೋಯಿ

(ಗುಡ್ಡೆಮನೆ ಅಪ್ಪಯ್ಯಗೌಡರ ಕಥೆ)

-ಬೈತಡ್ಕ ಜಾನಕಿ ಬೆಳ್ಯಪ್ಪ
21-16 ರೇಸ್‌ಕೋರ್ಸ್ ರಸ್ತೆ, ಮಡಿಕೇರಿ

ಚಾಮಿ : ದೊಡಪ ಓ ದೊಡಪಾ.... ಏನ್ ಮಾಡ್ತಾವಳರಿ – ಬಾರಿ ಕೆಲ್ಸ ಮಾಡುವಂಗೆ ಕಂಡದೆ?

ದೊಡಪ : ಎಂತ ಇಲ್ಲೆನೆ ಹೈದ – ಓಂಗೆ ಬೆಳೆ ಕಟ್ಟಕೆ ಹಗ್ಗ ಮಾಡೊನತಾ .... ಭೂತಾಳೆ ಹಾಳೆನ ಕಡಿತಾವಳೆ.

ಚಾಮಿ : ಅಲ್ಲಾ ದೊಡಪ – ಭೂತಾಳೆ ನಾರ್‌ಗಿಂತ ಇನ್ನೊಂದು ತಡೆದ್ ನಾರ್‌ನ ಸಿಗ್ಟ್ ಹಗ್ಗ ಮಾಡ್ಡು ವಳ್ಳದಲ್ಲಾ ಈ ನಾರ್ ತೆಗಿಯೊದು ಸುತ್ತುದು ಮಾಡ್‌ಕನ ಕೈ ತೊರ್ರುದು ಉರಿ ಆಕಿಲ್ಯಾ ದೊಡಪ?

ದೊಡಪ : ಅಲ್ಲನೆ ಹೈದಾ? ಆ ತಡೆ ಗಿಡೆ ಎಲ್ಲಾ ಆ ಕಾಲಕೇ... ಆಗೋತು ನೋಡು ಈಗ ಎಲ್ಲಿ ಸಿಕ್ಕದೆ? ಕಾಪಿ ತ್ವಾಟ ಸುಂಟಿ ಕೃಸಿ ಬರ್ಲ್ಲಾಗಿ ಕಾಡ್‌ಲಿ ಒಂದು ವಳ್ಳ ಮರ ಆಗಲಿ – ಮದ್ದ್ ಆಗಲಿ ಸಿಕ್ಕುದುಲೆ. ನಿಂಗೆ ಗೊತ್ತುಟಲೆ ಕಾಪಿ ತ್ವಾಟ ಮಾಡ್‌ಕಾಕನ ಕಾಡ್‌ನ ಎಸ್ಟ್ ನಾಸ ಮಾಡುವೆತ?

ಚಾಮಿ : ಅಲ್ಲಾ ಹಂಗೆ ಮಾಡದರೆ ತ್ವಾಟ ಹೆಂಗೆ ಆದು ದೊಡಪ? ಜನ ಬದ್ಕುದು ಹೆಂಗೆ? ಉದ್ಯೋಗಂತೂ ಸಿಕ್ಕುದುಲೆ – ಕೃಷಿ ಮಾಡ್ರು ಅದೂ ಫಲಯಿಲ್ಲೆ. ಅಲ್ಲಾ ದೊಡಪಾ–ನಾ ಬಂದ ವಿಸಯನೆ ಬ್ಯಾರೆ!

ದೊಡಪ : ಅದೆ! ನಿನ್ನ ನೋಡ್ಕನೆ ನಾನ್ ಗ್ಯಾನ ಮಾಡ್ಡೆ – ಈ ಹೈದ ಏನೋ... ಕೆಲ್ಸದ ಮ್ಯಾಲೆ ಇತ್ತ ಬರ್‍ತಾ ಉಟ್ಟು ಕಂಡದೆತ.

ಚಾಮಿ : ಅದೆ ದೊಡಪಾ... ನಾನ್ ಈಗ ಮಾಸ್ಟ್ರ ಕೆಲ್ಸಕೆ ಟ್ರೈಯಿನಿಂಗ್ ಮಾಡ್ತಾ ವಳದ್ ನಿಮಿಗೂ ಗೊತ್ತುಟು. ಈ ಹುತಾತ್ಮರ್ ತೇಳುವ ಒಂದು ವಿಸಯದ ಬಗ್ಗೆ ಚರ್ಚೆ ಇರ್ಲಿಕೊಂಡೊಳೊ. ಅದರ್ಲಿ ನಂಗೆ ಸಿಕ್ಕಿದ ವಿಸಯ ತೇಳ್ರೆ – ಕೊಡಗ್‌ನ ಹುತಾತ್ಮರ ಬಗ್ಗೆ–ಹಂಗಾಗಿ ಇತ್ತ ನಿಮ್ಮನ ಕೇಳನತ ಬಂದೆ.

ದೊಡಪ : ಅಲ್ಲನೆ ಹೈದ – ಅದೆಂತ ಒಂದು ಚರ್ಚೆತ? ಹಂಗೂ ಒಂದು ವಿಸಯ ಉಟ್ಟಾ?

ಚಾಮಿ : ಅಯ್ಯೊ ದೊಡಪಾ.. ನಿಮಿಗೆ ಅರ್ತ ಆದುಲೆ ಬುಡಿ. ಈ ಹುತಾತ್ಮರ್ ತೇಳ್ರೆ ಸ್ವಾತಂತ್ರಕ್ಕಾಗಿ ಹೋರಾಡ್‌ದವ್ರು. ದೇಸಕಾಗಿ ಹೋರಾಡ್‌ದವರ್ನ ಹುತಾತ್ಮರ್ ತ ಕರ್‍ದವೆ. ಈ ನನ್ನ ವಿಸಯ ಏನ್ ತೇಳ್ರೆ – ಅಂತದೇನಾರ್ ವಿಸಯ ನೀವ್ರುಗೆ ಗೊತ್ತುಟ್ಟಾತ? (ದೊಡಪ ಮಾಡ್ತಾಯಿದ್ದ ಕೆಲ್ಸನ ಒಮ್ಮೆಗೆ ನಿಲ್ಸಿತ್! ಗ್ಯಾನ ಮಾಡ್ತ – ತಲೆಗೆ ಕಟ್ಟದ ಚೆಕ್ಕ್ ವಸ್ತ್ರನ ಇನ್ನೂ ಗಟ್ಟ ಕಟ್ಟ ಸೊಂಟಕ್ಕ ಕೈ ಕೊಟ್ಟ್ ಗ್ಯಾನ ಮಾಡಿ ಹೇಳ್ದ....

ದೊಡಪ : ನೋಡು ಚಾಮಿ. ನಾನೇನೊ 2ನೇ ಕ್ಲಾಸ್ ಮಾತ್ರ ಓದಿದಂವ. ಆದರೆ ನಮ್ಮಪ್ಪನಪ್ಪ ತೇಳ್ರೆ ನನ್ನ ಚಾಂಪ ಆಗನೆ ನಾಕನೆ ಕ್ಲಾಸ್ ಓದಿ ಮಾಸ್ಟ್ರ ಕೆಲ್ಸ ಮಾಡ್ತಾಯಿದ್ದೊ ಗಡ! ಆಗನ ಕಾಲಲಿ ಇಸ್ಕೂಲುಗಳೇ ಇತ್ತ್‌ಲೆ. ಹೊಯ್ಗ ಮ್ಯಾಲೆ ಬೆರಳ್‌ನ ಹಿಡ್ಕಂಡ್ ಬರ್‌ತಿದ್ದೊಗಡಾ. ಆದರ್ನ ಊರ್ಲಿರುವ ಹಾರೋವ್ರುತೇಳ್ರೆ ಬ್ರಾಹ್ಮಣರ್ ಮಾಡ್ತಾ ಮಾಡ್ತಾಯಿದ್ದೊ, ಅದ್ಕೆ ಐಗಳ ಮಠತ ಹೇಳಿದ್ದೊಗಡ. ಬ್ರಿಟಿಷ್‌ನವ್ರು ಬಂದ ಮ್ಯಾಲೆ ಸ್ಕೂಲ್‌ಗ ಆದೊ. ಸ್ಕೂಲುಗೆ ಹೋಗಿ ಅಕ್ಷರ ಬರೆಯೊವ್ರು ಕಾಂಬಕಾದೊ ಅಂದ್‌ನ ಕಾಲಕ್ಕೆ 4ನೇ ಕ್ಲಾಸ್ ಓದಿದ ನಮ್ಮ ಚಾಂಪ ಬಾರಿ ಹೆಸ್ರ್‌ವಾಸಿ ಎಂತೆಂತೂ ಕತೆಗಳ್‌ನ ಒಕ್ಕುಲು ಹುಲ್ಲು ಕಟ್ಟ್‌ಕಾಕನ ಹೇಳ್ತಿದ್ದೊಗಡಾ.

ಚಾಮಿ : ಅತ್ ದೊಡಪ – ನಿಮ್ಮ ಚಾಂಪ ಹಂಗೆ ಹೇಳ್ದೊ ಹಂಗೆ ನಿಮಗೆ ಗೊತ್ತಿದ್ದಷ್ಟ ಹೇಳಿ.

ದೊಡಪ : ಆಗನ ಕಾಲಲಿ ಅವ್ರು ಮಡ್ಕೇರಿ ಅರಮನೆಲಿ ಕೆಲ್ಸ ಮಾಡ್ತಾಯಿದ್ದೊ ಗಡಾ. ಆಗೆಲ್ಲಾ ಅವ್ರು ನಡ್ಕಂಡ್ ಹೋಗ್‌ತಿತ್ತ್‌ಲೆ. ಕುದ್ರೆ ಮ್ಯಾಲೆ ಕುದ್ರೆ ಓಡಾಡಿ ಅಭ್ಯಾಸ. ಕುದುರೆಗಳ್‌ನೆ ಆಗನ ಕಾಲಲಿ ಬ್ರಿಟಿಷರ್ ಬ್ಯಾಂಡಿ ಕುದ್ರ್‌ತಿದ್ದೊಗಡಾ. ಹಂಗೆ ಚಾಂಪನ ಕುದುರೆಗೂ ಕುದ್ರ್

ಜಾಸ್ತಿ ಆಗಿ ಕುದುರೆ ಸಿಕ್ಕಾ ಬಟ್ಟೆ ಓಡ್ತಗಡ. ಆಗ ಚಾಂಪ ಬಿದ್ದ್ ಕಾಲಿಗೆ ಪೆಟ್ಟಾದ ಮ್ಯಾಲೆ ಕುದ್ದಲ್ಲೇ ಇರ್ತಿದ್ದೊ ಗಡಾ. ಬಂದವರ ಹತ್ರೆಲ್ಲಾ ಅಂದ್‌ನ ಕತೆಗಳ್‌ನ ರಸ-ಕೂಡ್ಸಿ ಹೇಳ್ತಿದ್ದೊಗಡ. ಆ ಕತೆ ಕೇಳಿಕೆ ನೆರೆಮನೆವು ದಾರ್ಲಿ ಹೋಗೂವೆಲ್ಲಾ ಬಂದ್ ಇವರ ಕೆಲ್ಸಕ್ಕೆ ಸೇರ್ಕಂಡ್ ಕೆಲ್ಸ ಮುಗ್ಸುದೇ–ಗೊತ್ತಾತಿತ್‌ಲೆಗಡ.

ಚಾಮಿ : ದೊಡಪಾ ನಿಮ್ಮ ಕತೆ ನೋಡ್ರೆ ಬಾರಿ ಲಾಯ್ಕಿರೊಕು ಕಂಡದೆ. ನಿಮಗೆ ಮರೆಪ್ಪು ಜಾಸ್ತಿ. ಅದ್ಕೆ ನೀವು ಹೇಳ್ದಂಗೆ ನಾನ್ ಬರ್ಕಣೆ. ನಾನ್ ಬಾಕನ ಬರೆಕೆ ಎಂತದು ತಾತ್‌ಲೆ. ನಿಮ್ಮ ಹತ್ರ ಬರೆಕೆ ಏನಾರ್ ಉಟ್ಟಾ ದೊಡಪಾ?

ದೊಡಪಾ : ಆ ಮ್ಯಾಜದ ಡ್ರಾಮೊಳಗೆ ಕಾಗದ ಪೆನ್ನ್ ಇದ್ದರೆ ತಕ. ಹಿಂಗೆ ಎಂತಕಾರ್ ಬೇಕಾದುತೇಳಿ ಪ್ಯಾಟೆಗೆ ಹೋಕನ ಕಾಗದ ತಂದ್ ಮಡ್ಕೊಂಬ ಅಭ್ಯಾಸ ನಂಗೆ. ನಂಗೆ ಮರ್‍ತೋದು ಜ್ಯಾಗ. ಅದ್ಕೆ ಕೆಲು ವಿಸಯನೆಲ್ಲಾ ನಾನ್ ಬರ್‍ಕೊಂಬದು. ನೋಡು ಚಾಮಿ. ನಾ ಹೇಳುವ ಕತೆ ನೀ ಬರೆವ ಕತೆ ಎಲ್ಲಾ ಕೂಡ್‌ಕನ ಒಂದು ವಳ್ಳ ಕೆಲ್ಸ ಮಾಡಿ ಉಳ್ಸಿದಂಗಾದು ಅಲ್ಲಾ?

ಚಾಮಿ : ಅತ್ ದೊಡಪ – ಇಂತ ವಿಸೆಯ ಎಲ್ಲವುಕು ಗೊತ್ತಿರುಲೆ ಮನ್ಸ್‌ಲಿ ದೊಡಪನ ಕಾಗದ ಹೊಗೆ ಹಿಡ್ಸುಟು ಈ ಹೊಗೆ ಅಡ್ಗೆ ಮನೆ ಹತ್ರ ಚೀಲದೊಳಗೆ ಹಾಕಿ ಮಡ್ಗಿರೆ ಹೆಂಗಾದು ಪರವಿಲ್ಲೆ. ವಳ್ಳ ವಿಸೆಯ ಬರೆಕೆ ಏನಾಕು? ಮುಂದೆ ಹೇಳಿ ದೊಡಪ...

ದೊಡಪ ಕತೆ ಹೇಳಿಕೆ ಸುರು ಮಾಡ್ದೊ ಚಾಮಿ ಬರ್‌ಕಂಡದೆ. ದೊಡಪ ಭಾರತ ದೇಸಲಿ ಎಷ್ಟೊ ಜೆನ ಸ್ವತಂತ್ರಕ್ಕಾಗಿ ಹೋರಾಡ್‌ದವುವಳೊ. ಭಾರತ ಮತ್ತೆ ಭಾರತ ಸಂಸ್ಕೃತಿತೇಳ್ರೆ ಅಂದ್ ನಮ್ಮವುಕೆ ಬಾರಿ ಅಭಿಮಾನ ಇತ್ತ್. ಬ್ರಿಟಿಸರು ಬಾಕೆ ಮುಂದೆ ಇಲ್ಲಿ ಬಾರಿ ಒಗ್ಗಟ್ಟ್‌ಯಿತ್ತ್. ಆಗೊಳು ಕೊಡ್ಗ್‌ಲಿ ವೀರರ್ ಧೀರರ್ ಸ್ವಾಮಿ ಭಕ್ತರ್ ತೇಳಿಯಿದ್ದೊ. ಆಗ ಆದ ಒಂದು ಕತೆ ಬೆಳ್ಕಿಗೂ ಬಾತ್‌ಲೆ ನೋಡು.

ಚಾಮಿ : ಅದೆಂತದ್ ದೊಡಪ ಮುಂದೆ ಹೇಳಿ....

ದೊಡಪ : ಮಡ್ಕೇರಿ ಕ್ವಾಟೆನ ಹಾಲೇರಿ ವಂಸದ ಲಿಂಗಾಯಿತ ರಾಜರ್ ಆಳ್ತಾಯಿದ್ದೊ. ಆ ಕಾಲದ ರಾಜರ ಆಡಳಿತ ಹೆಂಗಿದ್ರೂ ಪ್ರಜೆಗಳಿಗೆ ರಾಜನ ಮ್ಯಾಲೆ ಬಾರಿ ಭಕ್ತಿ, ಗೌರವಯಿತ್ತ್, ಪ್ರಜೆಗ ಬ್ರಿಟಿಷರ್‌ನ ಸಹಿಸದಾದೊ. ಬ್ರಿಟಿಷರ್‌ನ ಸ್ನೇಹ ಮಾಡ್ರೆ ಅಪಾಯ ಕಟ್ಟಿಟ್ಟದ್. ಚಿಕ್ಕ ವೀರರಾಜಂಗೆ ಅವು ಇವರ ರಾಜ್ಯಬಾರದ ವಿಸಯಕ್ಕೆ ಕೈ ಹಾಕುದು ಇಷ್ಟ ಇತ್ತುಲೆ.

ಚಾಮಿ : ಬ್ರಿಟಿಸರ್ ಇಲ್ಲಿಗೆ ಹೆಂಗೆ ಬಂದ್ ಸೇರ್‍ದೊತ ಗೊತ್ತುಟಾ ದೊಡಪಾ?

ದೊಡಪ : ಬ್ರಿಟಿಸರ್ ಬಾಕೆ ಮುಂದೆ ಕೊಡಗ್‌ನ ಮೇಲೆ ಮುಸ್ಲಿಮರ್ ತೇಳ್ರೆ ಟಿಪ್ಪು ಸುಲ್ತಾನ ಬಾರಿ ಸಲ ದಾಳಿ ಮಾಡ್ತ್. ಅವನ ಕಾಟ ತಡಿಯಕೆ ಬೊತ್ತದಾತ್. ಅದ್ಕೂ ಹಿಂದೆ ತಲ್‌ಚೇರಿಂದ ಬ್ರಿಟಿಷರ್ ಕೊಡ್ಗ್‌ನ ಲಿಂಗರಾಜನ ಸ್ನೇಹ ಬೆಳ್ಸಿಕಂಡ್ ಕೊಡ್ಗಿಗೆ ಪ್ಯಾಟೆಗೆ ತೇಳಿ ಬರ್ತಾಯಿದ್ದೊ. ಈ ರಾಜರೂ ಬ್ರಿಟಿಸರ್‌ನ ಆಗ ಗೌರವಂದ ಕಂಡೊ. ಹಂಗೆ ಬಂದಾಕನ ಇಲ್ಲಿನ ವನ ಸಂಪತ್ತ್ ಮತ್ತೆ ಪ್ರಕೃತಿ ಸೌಂದರ್ಯನ ಕಂಡ್ ಹೆಂಗಾರ್ ಮಾಡಿ ಕೊಡ್ಗ್‌ನ ನಮ್ಮ ವಸಕ್ಕೆ ತಕೊಣಕುತ ಮನ್ಸ್‌ಲೇ ಲೆಕ್ಕಾಚಾರ ಹಾಕಿದೊ. ಈ ಮುಸ್ಲಿಂಮರ್‍ನ ಓಡ್ಸಿಕ್ಕಾಗಿ ರಾಜ ಬ್ರಿಟಿಷರ ಸಹಾಯ ಪಡ್ಕಂಡತ್. ಹಿಂಗೆ ಇವು ಮಡಿಕೇರಿ ಕ್ವಾಟೆಗೆ ನುಗ್ಗಿದೊ.

ಚಾಮಿ : ಇದ್ ಸುಮಾರ್ ಯಾವ ಸಮಯಲಿ ಆತ್‌ತ ಗೊತ್ತುಟಾ ದೊಡಪಾ?

ದೊಡಪ : ಗೊತ್ತಿಲ್ಲದೇನ್? ನಮ್ಮ ಚಾಂಪ ಕತೆನೆಲ್ಲಾ ಒಂದು ಪುಸ್ತಕಲಿ ಬರ್‍ದ್ ಮಡ್ಗಿದ್ದೊ. ಅದ್ ಅಪನ ಚೆತ್ತದ ಕುತ್ತು ಪೆಟ್ಟಿಗೆ ವಳಗೆ ಇತ್ತ್. ಅಪ್ಪ ಸತ್ತ್ ಮ್ಯಾಲೆ ಪೆಟ್ಟಿಗೆ ಹುಡ್ಕಾಕನ ಅಲ್ಲೊಂದು ಹೊಗೆ ಹಿಡ್ದ ಪುಸ್ತಕಯಿತ್ತ್. ಅದರ್‍ನ ತೆಗ್ದ್ ನಾನ್ ಓದಿ ತಿಳ್ಕಂಡದ್ ಹೈದಾ? (ದೊಡಪ ಹೆಮ್ಮೆಂದ ಹೇಳಿ ನೆಗಾಡುವೆ)

ಚಾಮಿ ಗಂಭೀರಾಗಿ ಕತೆ ಕೇಳಿಕೆ ಕುದ್ದದೆ. ಹಿನ್ನಲೆ... ಸಂಗೀತ.....

ದೊಡಪ ಕತೆ ಮುಂದುವರ್‍ಸಿದೆ.

ಸುಮಾರು 1834ರ ಏಪ್ರಿಲ್ ಸಂಜೆ 6 ಗಂಟೆ ಹೊತ್ತಿಗೆ ಮಡ್ಕೇರಿ ಕ್ವಾಟೆನ ಬ್ರಿಟಿಸರ್ ವಸ ಪಡ್ಕಂಡ್ ಅಲ್ಲಿ ಅವರ ಬಾವುಟನ ಹಾರ್‍ಸಿದೊ. ಆಗ ಹಾಲೇರಿ ವಂಸದ ಚಿಕ್ಕ ವೀರರಾಜ ಅಲ್ಲಿ ಆಳ್‌ತಿತ್. ಮತ್ತೆ

ಅವನೇ ಕೊಡಗ್‌ನ ಕೊನೆ ರಾಜನೂ ಆತ್. ಪಾಪ! ಬ್ರಿಟಿಷರ್ ವಳಗೊಳಗ ಇಲ್ಲಿನ ಕೆಲವ್ರುಕೆ ಮುರಾಸೆ ತೋರ್‍ಸಿ ಏಸ ಬೀಜ ಬಿತ್ತಿದೊ. ಹಿಂಗಾಗಿ ಇವು ಸುಲ್ಬಾಗಿ ಕೊಡ್ಗ್‌ನ ಗೆದ್ದ್ ಮಡ್ಕೇರಿ ಅರಮನೆನ ವಸಪಡ್ಸಿಕಂಡೊ. ಚಿಕ್ಕವೀರರಾಜಂಗೆ ಅವನ ಸಂಸಾರಕ್ಕೆ ಬೇಕಾಗುವಸ್ಟ್ ಪೆನ್ಸನ್ ಕೊಡ್ಸಿ ಸಂಸಾರ ಸಮೇತ ಕಾಶಿಗೆ ಕಳ್ಸಿಕೊಟ್ಟೊ. ಅವರನ ಉಪಾಯ ಮಾಡಿ ಅತ್ತ ಕಳ್ಸಿದ ಮ್ಯಾಲೆ ಕೊಡ್‌ಗ್‌ಲಿ ದೊರೆತನ ಇಲ್ಲದಾತ್. ಬ್ರಿಟಿಸರ್ ಈ ಮಡಿಕೇರಿ ಕ್ವಾಟೆನ ವಸ ಪಡ್ಸಿಕೊಂಡ ಮ್ಯಾಲೆ ಇಲ್ಲಿಗೆ ಲಿಹರ್ಡಿ ತೇಳುವ ಒಬ್ಬ ಅಧಿಕಾರಿನ ನೇಮಿಸುವೆ. ಇವನೊ ಹ್ಯಾಟ್ ಬೂಟ್ ಹಾಕಿ ಪ್ರಜೆಗಳಿಗೆ ಬಾರಿ ಹಿಂಸೆ ಕೊಡ್ತಿತ್ತ್. ಕೊಡ್ಗ್‌ನ ಪ್ರಜೆಗಳಿಗೆ ಇಂವನ ತಲೆ ಕಂಡರೆ ಆತಿತ್‌ಲೆ!

ಚಾಮಿ : ಆಗ ಇಲ್ಲಿ ಯಾರು ವೀರರ್ ಧೀರರ್ ಇತ್ತ್‌ಲ್ಯೊ!

ದೊಡಪ : ಇಲ್ಲದೇನ್? ಆಗ ಕೊಡ್ಗ್ ದೇಸತ ಹೇಳ್ತಿದ್ದೊ.-ಕೊಡ್ಗ್ ತೇಳ್ರೆ ಶ್ರೀರಂಗಪಟ್ಣಂದ ಹಿಡ್ದ್ ಪುತ್ತೂರು ಬೆಳ್ಳಾರೆಗೆ ಮುಟ್ಟ ಇತ್ತ್. ಇಂದ್‌ನಂಗೆ ಕೊಡ್ಗ್‌ಲಿ ಬರೀ ಮೂರು ತಾಲೂಕುತ ಇತ್ತ್‌ಲೆ. ದೊಡ್ಡ ದೇಸ ಹೇಳ್ತಿದ್ದೊ. ಹಂಗೆ ಸುಳ್ಯ ಸೀಮೆತ ಸಹ ಹೇಳ್‌ತಿದ್ದೊ. ಈ ಸುಳ್ಯ ಸೀಮೆಲಿ ಹೆಚ್ಚಿನ ಸಂಕೆಲಿ ಗೌಡ ಜೆನ ನೆಲ್ಸಿದ್ದೊ. ಅಲ್ಲಿಂದ ಬಂದ್ ಕೊಡ್ಗ್‌ನ ಬಲಮುರಿ ತೇಳುವ ಜಾಗಲಿ ನೆಲೆ ನಿತ್ತಿದ್ದ ಗುಡ್ಡೆಮನೆ ಅಪ್ಪಯ್ಯಗೌಡ ತೇಳಂವ ಅರಸರ ಕಾಲಲಿ ಜಮದಾರ ಆಗಿ ಕೆಲ್ಸ ಮಾಡ್ತಾಯಿತ್ತ್. ಬ್ರಿಟಿಸ್ ಸರ್ಕಾರ ಈಗ ಅಂವನ ಸುಭೇದಾರ್ ತೇಳಿ ತಕಂಡಿದ್ದೊ. ಸ್ವೊಲ್ಪ ಸಮಯ ಅವರ ಆಡಳ್‌ತಲ್ಲಿದ್ದ ಅಪ್ಪಯ್ಯ ಗೌಡಂಗೆ ಬಾರಿ ಬೇಜಾರ ಆಗಿ ಈ ಬ್ರಿಟಿಸರ್‌ನ ಹಂಗಾರ್ ಓಡ್ಸಿ ಮಡ್ಕೇರಿ ಕ್ವಾಟೆಲಿ ಹಾಲೇರಿ ಅರಸರ ಒಡೆತನನ ಪುನಃ ತರೊಕು ತೇಳಿ ಮನ್ಸ್ ಗಟ್ಟಿ ಮಾಡಿ ಇಂವ ಸುಭೇದಾರ ಕೆಲ್ಸನ ಬುಟ್ಟಿತ್. ಚಿಕ್ಕವೀರರಾಜನ ಶಾಸ್ವತ ಆಗಿ ಕಾಶಿಗೆ ಕಳ್ಸಿದ ವಿಚಾರ ಕೆಲು ಜನತೇಳ್ರೆ ಪುಟ್ಟ ಬಸವರಾಜು, ಹುಲಿಕಡ್ಡ ನಂಜಯ್ಯ, ಚೆಟ್ಟಿ ಕುಡಿಯ, ಕುರ್ತುಕುಡಿಯ, ಗುಡ್ಡೆಮನೆ ಅಪ್ಪಯ್ಯ ಗೌಡ, ಸೋಮಯ್ಯ, ಮಾಚಯ್ಯ ತೇಳುವವ್ರುಕೆ ಗೊತ್ತಿತ್ತ್. ಪ್ರಜೆಗಳಿಗೆ ಗೊತ್ತಿತ್‌ಲೆ. ಅಂವ ಪುನಃ ಬಂದದೆ ತೇಳಿ ಪ್ರಜೆಗ ಗ್ಯಾನ ಮಾಡಿಕಂಡ್ ಭಾರಿ ದುಃಖಲಿ ಬೀಳ್ಕೊಟ್ಟೊ. ಹಿಂಗೆ ಇವೆಲ್ಲವೂ ಸನ ಒಟ್ಟಾಗಿ ಸೇರ್‍ದೊ. ಮುಂದೆ ಏನೇನ್ ಮಾಡೊಕು ತೇಳಿ ಒಳಗೊಳಗೆ ಉಪಾಯ ಮಾಡ್ತಾಯಿದ್ದೊ. ಆಗನ ಕಾಲಲಿ ಸುಳ್ಯಂದ ಮಡ್ಕೇರಿ ಅರಮನೆಗೆ ಬರೊಕುತಾದರೆ ಕಾಲ್‌ದಾರಿಲಿ ನಡ್ಕಂಡ್ ಅಲ್ಲರೆ ಕುದ್ರೆ ಮ್ಯಾಲೆ ಕುದ್ದ್ ಕುಂದುರುಮೊಟ್ಟೆ ಹತ್ತಿ ಬರಕಾಗಿತ್ತ್. ಆ ಮೊಟ್ಟೆನ ಪ್ರತಿಯೊಬ್ಬನೂ ಹತ್ತಿ ಬಂದ್ ಇಳ್ದ್ ಹೋತಿದ್ದೊ. ದಾರಿ ಬಾರಿ ಕಠಿಣದ ಕಾಡ್ ದಾರಿ ಆಗಿತ್ತ್ ಅಂದ್.

ಚಾಮಿ : ಈ ಅಪ್ಪಯ್ಯ ಗೌಡನೊಟ್ಟಿಗೆ ಇನ್ಯಾರಿದ್ದೊ ಗೊತ್ತುಟಾ?

ದೊಡಪ : ಇವನೊಟ್ಟಿಗೆ ಇನ್ನೂ ಕೆಲುಜೆನ ಮುಕುಂಡರಿದ್ದೊ. ಆಗನ ಕಾಲಲಿ ಯುದ್ಧ ಯಾಗ ಆದೆತ ಗೊತ್ತಿತ್‌ಲೆ. ಅದ್ಕೆ ರೈತರ್ ಸಹ ಸೈನಿಕರಂಗೆ ತಯಾರಾಗಿರ್‍ತಿದ್ದೊ. ಇವಲ್ಲದೆ ಹೆಚ್ಚಿನ ಕೊಡ್ಗ್‌ನವು ಸೇರ್‍ದೊ. ಇವರೆಲ್ಲರ ಗುರಿ ಸನ ಒಂದೇ ಒಂದು-ಈ ಬ್ರಿಟಿಸರ ಓಡ್ಸಿ ಮುಂದೆ ಹಾಲೇರಿ ಅರಸು ಮನೆತನದವರನ್ನ ಸಿಂಹಾಸನಲಿ ಕೂರ್‍ಸೊಕುತ.

ಚಾಮಿ : ಇದ್ಕೆ ಇನ್ನೂ ಮುಖ್ಯ ಕಾರಣ ಏನಾರ್ ಗೊತ್ತುಟಾ ದೊಡಪ?

ದೊಡಪ : ಬ್ರಿಟಿಸ್‌ನವ್ರುಕೆ ಕೊಡ್ಗ್‌ನ ಅರಣ್ಯ ಕಾಡ್‌ಲಿ ಓಡಾಡಿಕೆ ಕಷ್ಟ ಆತ್. ಇವು ಉಪ್ಪು ಹೊಸೆಮುಗೆ ಸನ ಸುಂಕ ಹಾಕಿದೊ. ಅವರ ಆಡಳ್‌ತದ ಅನ್‌ಕೂಲಕ್ಕಾಗಿ ಸುಳ್ಯ ಸೀಮೆನ ದಕ್ಷಿಣ ಕನ್ನಡದ ಮಂಗ್ಳೂರಿಗೆ ಸೇರ್‍ಸಿದೊ. ಅದ್ಕಿಂತ ಮುಂದೆ ಸುಳ್ಯದ ರೈತರ್ ತೆರಿಗ ರೂಪಲಿ ಭತ್ತ ಅಥವಾ ಇತರ ಧಾನ್ಯಗಳ್‌ನ ಎತ್ತ್‌ಗಳ ಬೆನ್ಸ್‌ಮ್ಯಾಲೆ ಹೇರ್‌ಕಟ್ಟಿ ಹೊರ್‍ಸಿ ಮಡ್ಕೇರಿ ಅರಮನೆಗೆ ತರುವ ಪದ್ಧತಿಯಿತ್ತ್. ಬ್ರಿಟಿಷರ್ ಹೇಳ್ದೊ. ನೋಡಿ ರೈತರೆ. ನಮಿಗೆ ನೀವು ಬೆಳ್ಸಿದ ಧಾನ್ಯ ಬ್ಯಾಡ. ಅದ್ರ ಬದ್ಲಿಗೆ ದುಡ್ಡುನ ರೂಪಲಿ ತೆರಿಗ ಕೊಡಿತ ಇದ್‌ರಿಂದ ರೈತರಿಗೆ ಬಾರೀ ಬ್ಯಾಜರ ಆಗಿ ಸಿಟ್ಟ್ ಸಹ ಬಾತ್. ಆಗ ಒಂದು ಬುಟ್ಟಿ ಭತ್ತಕ್ಕೆ ಬರೀ 1ರೂ. 2ರೂ. ಇತ್ತ್‌ಗಡ. ಹಿಂಗಾಗಿ ಸುಳ್ಯದ ರೈತರ್ ಎಲ್ಲ ಸೇರಿಕಂಡ್ ದಂಗೆ ಏಳಕೆ ಕಾರಣ ಆತ್‌ತ ಚರಿತ್ರೆ ಇಂದಿಗೂ ಹೇಳ್ದೆ.

ಚಾಮಿ : ಆಗ ಎಷ್ಟ್ ಕಷ್ಟ ಇದ್ದಿರೊಕು ಜೆನಕೆ ಅಲಾ ದೊಡಪಾ? ಈ ಕತೆ ಇನ್ನೆಷ್ಟುಟ್ಟು ದೊಡಪಾ?

ದೊಡಪ : ಈಗ ನೀನ್ ಎಲ್ಲಿಗೆ ಮುಟ್ಟಿ ಬರ್‍ದ್ರ? ಹ್ಂ. ಈಗ ಈ ತಂಡದ ನಾಯಕ ಆಗಿ ಅಪ್ಪಯ್ಯ ಗೌಡನ ಬುಟ್ಟೊ ಇಂವಂಗೆ ಸುಭೇದಾರ ಆಗಿದ್ದ ಅನುಭವ, ಅರಸನ ಜಮೆದಾರ ಆಗಿದ್ದ ಅನುಭವ ಇತ್ತ್. ಇಂವನ ಓಂದೆ ಕಲ್ಯಾಣ ಸ್ವಾಮಿ, ರಾಮ ಗೌಡ, ನಂಜಯ್ಯ, ಸೋಮಯ್ಯ ಸೇರಿ ಒಟ್ಟಿಗೆ ಕೊಡ್ಗ್‌ನ 13 ಜನ ಬ್ಯಾರೆ ಬ್ಯಾರೆ ಜನಾಂಗದ ವೀರ ಮುಖಂಡರಿದ್ದೊ ಮತ್ತೆ ಚೆಟ್ಟಿಕುಡಿಯ ಕುರ್ತು ಕುಡಿಯತೇಳುವ ಇಬ್ಬರು ಅಂಗ ರಕ್ಷಕರಿದ್ದೊ. ಈ ತಂಡದ ಸೈನ್ಯ ಸೇರಿ ಒಟ್ಟಿಗೆ ಮಂಗ್‌ಳೂರ್ ಕಡೆಗೆ ಹೊರ್‍ಟತ್. ಆಗ ಲಕ್ಷ್ಮೀನಾರಾಯಣ ತೇಳುವ ಒಬ್ಬ ದಿವಾನ ಅಮರ ಸುಳ್ಯದ ರೈತರಿಗೆ ಭಾರಿ ಕಾಟ ಕೊಡ್‌ತ್ತಿತ್ತ್. ಈ ಸೈನ್ಯ ಇಂವನ ಸೊಂಟನ ಮುರ್ದ್ ಹಾಕಿ ಅಲ್ಲಿಗೆ ಸುಭೇದಾರ್ ತಿಮ್ಮಪ್ಪಯ್ಯ ತೇಳುವವನ ಕೂರ್‍ಸಿದೊ. ಬೆಳ್ಳಾರೆ ಪುತ್ತೂರು ಪೂರ್ತಿ ಇವರ ವಸ ಆತ್. ಮತ್ತೆ ರಭಸದಂದ ಈ ಸೈನ್ಯ ಮಂಗ್ಳೂರ್ ಕಡೆ ಹೊರ್‍ಟತ್. ಆಗ ಅಲ್ಲಿದ್ದ ಬ್ರಿಟಿಸರ್ ಇವರ ದಂಡ್ ನೋಡಿ ಹೆದ್‌ರಿ ತಲ್ಚೇರಿಗೆ ಓಡಿ ಹೋದೊ. ಮಂಗಳೂರ್‌ಲಿದ್ದ ಖಜಾನೆ ಇವರ ಕೈವಸ ಆತ್.

ಚಾಮಿ : ದೊಡಪ ಕುಡಿಯಕೆ ನೀರ್ ತಕಣಿ. ಕತೆ ಹೇಳಿ ಸುಸ್ತಾಗುಟ್ಟು ನೀವುಗೆ

ದೊಡಪ : ಮದ್ಯ ಮಾತಾಡ್ ಬಡ ನೋಡು. ಈಗ ಈ ವಿಸಯ ಜೆನಕಲ್ಲ ಗೊತ್ತಾಗಿ ಬ್ರಿಟಿಷರ್‌ನ ಓಡ್ಸಿಕೆ ಜನ ನಾಪೋಕ್ಲು, ಭಾಗಮಂಡ್ಲ ಕಡೆಂದ ಓಡೋಡಿ ಬಂದೊ. ಇವೆಲ್ಲವೂ ಸಾವ್ರಾರು ಜೆನ ಕತ್ತಿ ಕೋವಿ ಇನ್ನೂ ಎಂತೆಂತದೊ ಆಯುಧಗಳನ ದೊಣ್ಣೆ ಬಡ್ಗೆ ತಕಂಡ್ ದಾರ್‍ಲಿ ಸಿಕ್ಕಿದ ಬ್ರಿಟಿಸರನ ತಲೆ ಕಂಡಲ್ಲಿ ಕಡ್ಕಂಡ್ ಹೊರ್‍ಟೊ. ಆಗ ಬ್ರಿಟಿಸ್‌ನವುಕೆ ನಿಜಾಗಿ ಹೆದ್ರಿಕೆ ಆತ್! ಆಗ ಅವು ಗುಳ್ಳೆನರಿ ಕುದ್ಕ ನಂಗೆ ಒಂದು ಹೊಸ ಆಲೋಚನೆ ಮಾಡ್ದೊ. ದೊಡ್ಡ ಪದವಿಲಿ ಇರೊರ್‍ನ ವಳ್ಳದ್ ಮಾಡ್‌ಕಂಡ್ ಇಲ್ಲಿನವರೆಗ್ನ ಚೂಬೂಟ್ಟೊ. ಈ ದಂಡ್‌ನ ಮುಖ್ಯಸ್ಥ ಅಪ್ಪಯ್ಯ ಗೌಡನ ಹಿಡ್ದ್ ಕೊಟ್ಟವುಕೆ ಹತ್ತ್ ಸಾವಿರ (10 ಸಾವಿರ) ರೂ. ಕೊಟ್ಟವೆ ತೇಳಿ ಘೋಸಣೆ ಮಾಡ್ದೊ. ಗ್ಯಾನ ಮಾಡ್ ಅಂದ್‌ನ ಕಾಲಕ್ಕೆ ಅವನ ತಲೆಗೆ ಬೆಲೆ ಎಷ್ಟಿತ್ತ್‌ತ? ಓಂಗೆ ನಮ್ಮವರ ಕೈಲೇ ಅವನ ಹಿಡ್ಸ್ ಕೊಡದರೆ ನಿಮಿಗೆ ಗುಂಡು ಹೊಡ್ವೆತ ಎದೆಗೆ ಗುರಿ ತೋರ್‍ಸಿ ಹೆದ್ರಿಸಿದೊ. ಓಂಗೆ ಅಣ್ಣ ತಮ್ಮಂದರಂಗಿದ್ದ ಕೊಡಗರ್‍ನ ಗೌಡಗಳ್ನ ಬ್ಯಾರೆ ಬ್ಯಾರೆ ಮಾಡ್ದೊ. ಇವರ ಕಾರ್ಯಕ್ಕೆ ಉಪಯೋಗಿಸಿ ಕಂಡ್ ಕೆಲ್ಸ ಮುಗ್ದ ಮ್ಯಾಲೆ ಅವರನ್ನೂ ಕೊಂದೊ.

ಚಾಮಿ : ನಿಶಬ್ದ ಪಾಪ.... (ಕತೆ ಮುಂದುವರ್ದದೆ)

ಅಪ್ಪಯ್ಯ ಗೌಡ ಬಾರಿ ಸೂರತನಲಿ ಹೋರಾಡ್ತ್. ಮಡ್ಕೇರಿಗೆ 4 ಮೈಲ್ ದೂರದ ಕಾಟಗೇರಿತೇಳುವಲ್ಲಿ ಸೆರೆಸಿಕ್ತ್. ಉಳ್ದಕಡೆ ಎಲ್ಲಾ ಗೆದ್ದ್ ಬಂದ್ ಮಡ್ಕೇರಿ ಕ್ವಾಟೆ ಮಾತ್ರ ಬಾಕಿ ಇತ್ತ್. ಓಂಗೆ ಭಾಗಮಂಡ್ಲ ಕಡೆಂದ ಬಂದವು ಕಾಟಗೇರಿ ಹತ್ರ ಹಿಡ್ದೊತ ಹೇಳುವೆ. ಇಂವನ ಹಿಡ್ದ್ ತಂದ್ ಮಡ್ಕೇರಿ ಕ್ವಾಟೆ ಎದ್‌ರ್ ಎತ್ತರ ಸ್ಥಳಲಿ ನೇಣಿಗಂಬಕೆ ಏರ್‍ಸಿದೊ. ಕಲ್ಯಾಣಪ್ಪ ರಾಮಗೌಡನ ಮಂಗಳೂರ್‌ನ ಬಿಕರ್ನಕಟ್ಟೆಲಿ ಗಲ್ಲಿಗೇರ್‍ಸಿದೊ. ಉಳ್ದವುಕೆ ಜೀವಾವಧಿ ಶಿಕ್ಷೆ ಕೊಟ್ಟ್ ಗಡಿಪಾರ್ ಮಾಡ್ದ ಪಳ್‌ಮೆ ಅಂದ್ ಇತ್ತ್.

ಚಾಮಿ : ಇದ್ ಸುಮಾರ್ ಯಾಗ ಆತ್‌ತ ಗೊತ್ತುಟಾ ದೊಡಪಾ?

ದೊಡಪ : ಇದ್ ಸುಮಾರ್ 1837 ಅಕ್ಟೋಬರ್ 31ರ ಹೊತ್ತಾರೆ 10 ಗಂಟೆಗೆತ ಬರ್‌ಕಂಡುಟ್ಟು. ಆ ದಿನ ಹೊತಾರೆ 10 ಗಂಟೆಗ ಊರುನಾಡ್ ಪಟೇಲರ್‍ಗಳ್ನ ಮುಖ್ಯಸ್ಥರ್‍ನೆಲ್ಲಾ ಕರ್‍ದ್ ಅವರ ಕೈಲಿದ್ದ ಆಯುಧಗಳ್‌ನ ಅವರ ಕಾಲ್‌ಕೆಳಗೆ ಮಡ್ಗ್‌ಸಿ ಶರಣಾಗುವಂಗೆ ಮಾಡ್ದೊ. ಇನ್ನ್ ಮುಂದೆ ನೀವೆಲ್ಲಾ ನಮ್ಮ ಅಡಿಯಾಳಾಗಿಹೋಕುತ ನಮ್ಮ ಎದ್‌ರ್ ತಿರ್‍ಗಿ ನಿಲ್ಲಿಕಾಗದ್‌ತ್ ಪ್ರಜೆಗಳ ಕಣ್ಮುಂದೆ ಗಲ್ಲಿ ಗೇರ್‍ಸಿ ಈ ಭೀಕರ ದೃಶ್ಯನ ಪ್ರತಿಯೊಬ್ಬ ನೋಡುವಂಗೆ ಮಾಡ್ದೊ. ಹಂಗೆ ಇವೆಲ್ಲವು ಈ ಕರ್‌ಳ್ ಕತ್ತ್‌ಸುವ ದೃಶ್ಯನ ನೋಡಿ ಕಣ್ಣೀರ್ ಸೊರ್‍ಸಿದೊ. ಅಂದ್‌ಂದ ಬ್ರಿಟಿಸರ್ ಕೊಡಗ್‌ನ ನೂರು (100) ವರ್ಷ ಆಳ್ದೊ. ಅವರ ಸಂಸ್ಕೃತಿನ ಇಲ್ಲಿ ಬುಟ್ಟ್ ಹೋದೊ.

ಚಾಮಿ : ಎಂತಪ ಅನ್ಯಾಯ! ಈ ಕತೆನ ಕೇಳಿ ಚಾಮಿ ಬೇಜಾರಲಿ ಸೊಲ್ಪ ಹೊತ್ತು ಕುದ್. ಮತ್ತೆ ಹೇಳ್ತ್ ಅಲ್ಲಾ ಇಂತ ಕತೆಗೆ ಬೆಳ್‌ಕಿಗೆ ಯಾಕೆ ಬಾತ್‌ಲೆತ? ಗ್ಯಾನ ಮಾಡ್ದೆ. ಆಗ ಅವರ ವಯಸ್ ಎಷ್ಟಿತ್ತ್‌ತ ಗೊತುಟಾ ದೊಡಪಾ?

ದೊಡಪ : ಅವರ ಮತ್ತೆ ಅವರ ಕೂಟುನವು ತೀರಾ 40–45ರೊಳಗೆ ವಯಸ್‌ನವು ಆಗಿದ್ದೊ. ಎಲ್ಲಾ 13 ಜನ ಧೀರರ್ ಸನ ಒಮ್ಮೆಗೆ ಹೋದೊ.

ಅಪ್ಪಯ್ಯ ಗೌಡನ ಕುಟುಂಬದವು ಸುಳ್ಯಂದ ಬಂದ್ ಬಲಂಬೇರಿಲಿ ಈಗನ ಮಡ್ಕೇರಿ ತಾಲೋಕು ಬಲಮುರಿ ಗ್ರಾಮದ ನೆಲ್ಲಿದ್ದೊ ಇವುಕೆ ಸೋಲು ಆದೆತ ಗೊತ್ತಾಗಿ ರಾತ್ರೊ ರಾತ್ರೆ ಬಲಮುರಿಗೆ ಹೋಗಿ ಹೆಣ್ಣ್‌ನ ಒಬ್ಬಳೇ ಮಾಗಳ್ನ ಅವರ ಅಣ್ಣ ತಮ್ಮಂದ್ರ್‌ಗೆ ಒಪ್ಪಿಸಿ ಅವುಕೆ ಜೀವನಾಂಶಕ್ಕೆ ತೊಂದರೆ ಆಗದಂಗೆ ಮಾಡಿ ಮತ್ತೆ ಬಂದ್ ಬ್ರಿಟಿಸರ್ ಕೈಗೆ ಸಿಕ್ಕಾಕಂಡೊ. ನೇಣಿಗೆ ಏರ್ಲುವ ದಿನ ಹೆಣ್ಣ್‌ನ ಮಗಳ ಸಹ ಕರ್ಲಿದ್ದೊ. ಆಗ ಅಪ್ಪಯ್ಯ ಗೌಡ ಬೆಳಿ ಕುಪ್ಪಸ ದಟ್ಟಿ ಕಟ್ಟಿ ತಲೆಗೆ ಜರಿ ರುಮಾಲ್ ಬಿಗ್ದ್ ಮತ್ತೆ ಅವರ ಹೆಣ್ಣ್ ಅಕ್ಕವ್ವ ತೇಳೊವ್ವೊ ಧಾರೆಸೀರೆ, ಉದ್ದ ಕೈ ರವುಕೆ, ಕೋರ್ ವಸ್ತ್ರ ಕಟ್ಟಿ ಮುಂದೆ ನೆರಿಗೆ ಸೀರೆಲಿ ಗೇಂಟಿ ಕಟ್ಟಿದ್ದೊಗಡ. ಇದ್ ಆಗನ ಮದುವೆ ಉಡ್ಪು ಆಗಿತ್ತ್. ಅವರ ಮಗ್ಳು ಪ್ರೇಮ ಬರೀ ಹತ್ತ್ ವರ್ಸದ ಗೂಡೆ ಆಗಿತ್ತ್‌ಗಡ. ಆಗನ ಕಾಲಲಿ ಎಲ್ಲಿ ಹೋದರೂ ಗೌಡ ಹೆಣ್ಣ್‌ಜೆನ ಅದೇ ಉಡ್ಪುಲಿ ಹೋತಿದ್ದೊಗಡ. ಈಗನಂಗೆ ಕನ್ನಾಡಸೀರೆ ಉಡ್ತಾ ಇತ್ತ್‌ಲೆ.

ಚಾಮಿ : ಮತ್ತೇನಾತ್ ದೊಡಪ?

ಅಂತೂ ಈ ದಂಗೆಲಿ ಬ್ರಿಟಿಸ್‌ನವುಕೆ ಸಹಾಯ ಮಾಡ್ದವುಕೆಲ್ಲಾ ಬಾರಿ ಬಾರಿ ಬಹುಮಾನ ಒಡಿಕತ್ತಿ, ಕೋವಿ ಚಿನ್ನದ ಪದಕ, ಚಿನ್ನದ ಪೀಚೆಕತ್ತಿ. ಮೂರು ತಲೆಮಾರ್‌ಗಾಗುವಷ್ಟು ಉಂಬಳಿ ಆಸ್ತಿ ಕೊಟ್ಟೊ. ಹಿಂಗೆ ಸುಳ್ಯದ ಗೌಡರ ಮ್ಯಾಲೆ ಬ್ರಿಟಿಸರ್ ಸಿಟ್ಟಾಗಿ ಇವರ್ನ ತುಳ್ದ್‌ಬುಟ್ಟೊ. ಆಕಡೆ ರಸ್ತೆ, ಸೇತುವೆ, ಸ್ಕೂಲ್, ಆಸ್ಪತ್ರೆ ಎಂತದು ಮಾಡ್ತ್‌ಲೆ. ಹಂಗೆ ಅಲ್ಲಿನ ಜೆನ ಬ್ರಿಟಿಸರ್ ಇದ್ದಷ್ಟ್ ದಿನ ಪಳ್ಳದಾತ್ಲೆ. ಮುಂದೆ ಬ್ರಿಟಿಸರ್ ಕೊಡ್ಗ್‌ನ ನೂರು ವರ್ಷ ಸುಖವಾಗಿ ಆಳಿ. ಅವರ ಪದ್ದತಿನೆಲ್ಲಾ ಇಲ್ಲಿ ಬುಟ್ಟ್ ಹೋದೊ. ಅಲ್ಲದೆ ಚರಿತ್ರೆಲಿ ಇದ್ಕೆ ಅಮರ ಸುಳ್ಯದ ರೈತರ ದಂಗೆತೇಳಿ ಹೆಸ್ರಾತ್.

ನಿರೂಪಣೆ : ಕತೆ ಕೇಳಿ ಮುಗಿಕಾಕಾನ ದೊಡಪನ ಮೊಕ ಕಂದಿ ಹೋಗಿತ್ತ್. ಒಂದು ಚಾಲಮುಂಡು ತನ್ನಿತ ಅಲ್ಲಿದ್ದವುಕೆ ಹೇಳ್ತ್. ಇದ್ಯಾಕಪ್ಪತ ನೋಡ್‌ಕಾಕನ ಚಾಲಮುಂಡು ತೆಗ್ದ್ ಕುತ್ತಿಗೆಗೆ ನೇಣ್ ಬಿಗ್ದ್ ಸತ್ತಂಗೆ ಅಡಿ ತೋರ್ಲಿತ್. ದೊಡಪನ ಕಣ್ಣ್‌ಲಿ ನೀರ್ ಸೋರಿತಾ ಇತ್ತ್. ಕತೆ ಕೇಳಿ ನಂಗೂ ಮನ್ಸ್‌ಕಲ್ಲಾತ್. ಆದರೂ ಒಳ್ಳೆ ಕತೆ ಸಿಕ್ತ್‌ತ ಕುಸೀನೂ ಆತ್. ಈ ಅಪ್ಪಯ್ಯ ಗೌಡ ದೊಡಪನ ಸ್ವಂತ ನೆಂಟ್ರ ಸಂಬಂಧಿ ಆಗಿದ್ದೊಗಡಾ. ಅಂತೂ ಈ ಸಲ ನಂಗೆ ಬಹುಮಾನ ಬಂದೇ ಬರೋಕುತ ಚಾಮಿ ಮನೆಕಡೆ ಹೊರ್ಟದೆ.

ಅದರ ಸಾಕ್ಷಿಗೆ ಇಂದಿಗೂ ಮಡಿಕೇರಿ ಗೌಡ ಸಮಾಜಕ್ಕೆ ಹೋಗುವ ದಾರಿಗೆ ಗುಡ್ಡೆಮನೆ ಅಪ್ಪಯ್ಯ ಗೌಡ ರಸ್ತೆ ತೇಳಿ ಕಲ್ಲ್‌ಲಿ ಬರ್ದ್ ಮಡ್‌ಗ್ಯೊಳೊ. ❑

---

## ಹನಿಗವನ

### ಅವ್ವ

ನನ್ನ ಅವ್ವ ಶೇಷವ್ವ
ಮುದ್ದಿನ ಅವ್ವ
ವಯಸ್ಸು ಎಂಭತ್ತು
ಮನಸ್ಸು ಇನ್ನು ಇಪ್ಪತ್ತು

–ಶಾಲಿನಿ ನಿತ್ಯ ಅಯ್ಯೇಟಿರ
ಯಲಹಂಕ, ಬೆಂಗಳೂರು

# "ಸೋಮವಾರಪೇಟೆವು"



– ಬರ್ದವು: ವಿಶ್ವನಾಥ್ ಎಡಿಕೇರಿ

ಜನನಿ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ....
ಹುಟ್ಟಿದ ಊರ್ ಎಲ್ಲವ್ಕೂ ಸ್ವರ್ಗಕ್ಕೆ ಸಮಾತ ಹೇಳುವ ಮಾತ್
ವೇದಪುರಾಣ ಕಾಲಂದೇ ನಡ್ಕಂಡ್ ಬಂದುಟ್ಟು
ಹಳ್ಳಿನ ಬುಟ್ಟ್ ಡೆಲ್ಲಿಗೆ ಹೋದರೂ ನೆಂಪು ಬೆಚ್ಚಂಗೆ ಮಲಗಿಟ್ಟು
ಯಾಕೆತ ಹೇಳಿರೆ..... ಈ ಮಣ್ಣ್‌ಲಿ, ಮೆಟ್‌ಕಲ್ಲ್‌ಕೆಳಗೆ
ನಮ್ಮ ಹೊಕ್ಕುಳಬಳ್ಳಿ ಹುಗುದುಟ್ಟು.....!

ನಾಲ್ಕ್ ತಲೆನ ಹಿಂದೆ ನಮ್ಮ ಅಜ್ಜಂದರ್ ಐನ್ ಮನೆಗಳಂದ ಪಿಂಗಿದೋ
ಹೊಟ್ಟೆ ತುಂಬುಸಿಕೆ ಹೊಸ ಜಾಗ ಹುಡುಕಿ ವಲಸೆ ಹೊರಟೋ
ಎಲ್ಲೆಲ್ಲೋ ತಡಕಾಡಿ ನೆಲ–ಜಲ ನೋಡಿ ಪೊರ್ಲಾದ ಜಾಗಲಿ ನೆಲೆನಿಂತೋ
ಸೋಮ್ವಾರಪೇಟೆಂದ ಹಂಜ ಮುಂದೆ – ಮೂಡ್ಲಿಮೆಂದ ಸ್ವಲ್ಪ ಹಿಂದೆ
ಪಂಚಾಂಗ – ಪಾಯ ಹಾಕಿದೋ
ಉತ್ತರ ದಿಕ್ಕ್‌ಗೆ "ಮಳೆ ಮಲ್ಲೇಶ್ವರ" ಬೆಟ್ಟ, ದಕ್ಷಿಣಲಿ ಕಣಿವೆ ರಾಮೇಶ್ವರ
ಕೂಗಳತೆ ದೂರಲಿ ಸುಳುಗೋಡು ಸೋಮೇಶ್ವರ
ಮುಕ್ಕಣ್ಣ ಈಶ್ವರನ ಮೂರು ಕಣ್ಣ್ ನಡುಲಿ ನೆಲೆನಿಂತ
ನಮ್ಮ ಹಿರಿಯರಿಗೆ ಇಗ್ಗುತ್ತಪ್ಪನ ಆಶೀರ್ವಾದ ಯಾಗೋಳು ಇತ್

ಎಡ ಪಾರೆಂದ ಹಿಡ್ದ್ – ಮಾಲಂಬಿ ಕಡೆಗೆ
ಸಿದ್ದಲಿಂಗಪುರಂದ ಸುರು ಆಗಿ ಹೊಸಗುತ್ತಿ – ಹೆಣ್ಣೂರುವರೆಗೆ
ನಡುಲಿರವ ಹಾಲಂತ ಊರ್, ಆಲೂರುಸಿದ್ದಾಪುರ
ಶಿವನ ತಲೆಮೇಲೆ ಬೆಳಗುವ ಚಂದ್ರನಂಗೆ, ನಮ್ಮ ಸಂಗಯ್ಯನಪುರ
ಇಲ್ಲೆಲ್ಲಾ ಉಟ್ಟು ಕಾಡ್ ಮನ್ಸರ ಗುಹೆಗ, ಜೈನ ಮುನಿಗಳ ಶಿಲ್ಪಗ,
ಸಿದ್ಧ ಪುರ್‌ಸರ ತಪಸ್ಸ್ ಮಾಡ್ದ ಬೆಟ್ಟಗ,
ಕೆರೆಗೆ ಹಾರ ಆದ ಸತಿ ಹೊನ್ನಮ್ಮನ ತುಂಬಿದ ಕೆರೆಗ

ಐನ್ ಮನೆವು ಹೇಳುದು ಸೋಮವಾರಪೇಟೆವುತ,
ಮೂಡ್ಲಿಮೆವು ಹೆಸರಿಟ್ಟದ್ ನಾಡವುತ
ಹೆಚ್ಚಿಗೆ ತಲೆ ಕೆಡ್ಸದೆ – ಕೆಚ್ಚ್‌ಂದ ಕಾಡ್ ಬೆಚ್ಚಂಗೆ ಮನೆಮಾಡ್ಡೋ
ತಾಕತ್ ಇದ್ದದ್ಷ್ ಜಾಗನ ಸಾಗು ಮಾಡ್ಡೋ
ಬಿತ್ತಿದ ಒಂದ್ ಕಾಳ್ ನೂರ್ – ಸಾವಿರ ಆತ್
ಅಟ್ಟಲಿದ್ದ ಕಡಿಕೆ ತುಂಬಿ, ಪತ್ತಾಯಗಳಲ್ಲಿ ಮುಚ್ಚಿ ಇಸ್‌ತ್ತಿದ್ದೋ

ರಟ್ಟೆಬಲಂದ ಗೈದ್ ರಕ್ತ–ಬೆವರು ಹರ್ಸಿ
ಭೂಮಿತಾಯಿ ಕೊಟ್ಟ ಭತ್ತ, ಜೋಳ ತರಕಾರಿ ಬೆಳಿಸಿದೋ
ಬೆಟ್ಟದಂಗೆ ಬೀಳುವ ಭತ್ತದ ರಾಶಿ ನೋಡಿ ನೆಂಟ್ರೆಲ್ಲಾ ಬಾಯಿಗೆ ಬೆರಳಿಟ್ ಕಂಡೋ
ಬರ ಬಂದರೂ ಬಂಗ ಇಲ್ಲೆ – ಮಳೆ ಹೊಡ್ದರೂ ಚಿಂತೆ ಇಲ್ಲೆ
ನಮ್ಮ ಮಣ್ಣ್ ನಮ್ಮ ಅನ್ನ ನಾವು ಯಾರಿಗೂ ಕಮ್ಮಿ ಇಲ್ಲೆ

ಎರಡು ವರ್ಷಕ್ಕೊಂದು ಬೆಳೆ ಆದರೂ, ಮಳೆ ಇಲ್ಲದೆ ನೆಲ ಕಾದರೂ
ನೆಲ ಗುದ್ದಿ ನೀರು ಉಕ್ಕಿಸುವ ಬಲ ನಮ್ಮ ರಟ್ಟೆಲಿ ಉಟ್ಟು
ಬಿಟ್ಟಿದ ಕೊಂಬಿಲಿ ಫಸಲು ಬೆಳ್ಸುದು ಈಗ ನಮಗೆ ಗೊತ್ತುಟ್ಟು
ಪೊರ್ಲ್‌ನ ಈ ಊರಲಿ ಎಲ್ಲರೊಟ್ಟಿಗೆ ಹೊಂದಿಕಂಡ್
ಕಷ್ಟಲಿ ಸುಖಲಿ ಒಗ್ಗಟ್ಟ್‌ನ ಬಲ ತೋರಿಸಿ
ನಮ್ಮದೇ ಸಂಘ ಕಟ್ಟಿ ನೆಮ್ಮದಿಲಿ ಬದುಕಿವೆ

❑

## ಅರೆಭಾಷೆ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಗೊಂಡ ಸಾಧಕರ್



### ಶ್ರೀ ಹೊಸೂರು ಶಿವ ಪ್ರಕಾಶ್ – (ಸಮಾಜಸೇವೆ)

ಇವ್ ಹೊಸೂರು ಕಾಳಪ್ಪ ಮತ್ತೆ ಜಾನಕಿ ದಂಪತಿಯ ಮಂಜ . ಇವ್ ಡಿಪ್ಲೋಮಾ ಇನ್ ಕಂಪ್ಯೂಟರ್ ಸೈನ್ಸ್ ಮುಗಿಸಿದ ನಂತರ ಕ್ಯಾಲಿಗ್ರಫಿ – ಹ್ಯಾಂಡ್ ರೈಟಿಂಗ್ ಅನಲೈಸಿಸ್ ಬಗ್ಗೆ ತರಬೇತಿ ಪಡ್‌ದೊಳೊ. ಇವ್ ಮಕ್ಕಳಿಗೆ ವಿದ್ಯಾದಾನ ಮಾಡಿಕಾಗಿ ಗ್ರಾಮಂತರ ಪ್ರದೇಶವಾದ ಆಲೂರು ಸಿದ್ದಾಪುರ ಗ್ರಾಮಲಿ 2005ನೇ ಇಸವಿಯಲ್ಲಿ ಸಾಯಿ ಎಜುಕೇಶನ್ ಟ್ರಸ್ಟ್‌ನ ಮಾಡಿ ಜಾನಕಿ ಕಾಳಪ್ಪ ಶಾಲೆನ ಕಟ್ಟಿಯೊಳೊ. ಇವರ ಸಂಸ್ಥೆಲಿ ಹಾಲಿ ಯು.ಕೆ.ಜಿ.ಯಿಂದ ಹತ್ತನೇ ತರಗತಿ ಮಟ್ಟ ವಿದ್ಯಾಭ್ಯಾಸ ಕೊಡ್ತಳೊ. ಇವ್‌ಕೆ ಬಾಯನ್ಸ್ ವಿದ್ಯಾಸಂಸ್ಥೆಲಿ. ಟೈಮ್ಸ್ ಆಫ್ ಇಂಡಿಯಾ ಎಜುಕೇಶನ್ ಟ್ರಸ್ಟ್‌ಲಿ. ಡೆಕ್ಕನ್ ಹೆರಾಲ್ಡ್. ಕನ್ನಡ ಪ್ರಭ ಸಂಸ್ಥೆಲಿ ಸೇವೆ ಸಲ್ಲಿಸಿದ ಅನುಭವವುಟ್ಟು. ಸಮಾಜ ಸೇವೆಲಿ ತೊಡಗಿಸಿಕೊಂಡ ಇವ್‌ಕೆ ಕಮಲ ವೀರ ಚಕ್ರ. ಮತ್ತೆ 2014ರಲಿ ಓಂಕಾರ್ ಅವಾರ್ಡ್ ಪ್ರಶಸ್ತಿ ಸನ ಸಿಕ್ಕುಟ್ಟು.



### ಶ್ರೀ ಅತ್ಯಾಡಿ ಪೂವಯ್ಯ – (ಸಂಸ್ಕೃತಿ)

ಇವ್ ಕೊಡಗ್ ಜಿಲ್ಲೆ, ಸೋಮವಾರ ಪೇಟೆ ತಾ॥ ಚಿಕ್ಕಕಣಗಲು ಗ್ರಾಮದ ದಿವಂಗತ ಅತ್ಯಾಡಿ ಮುದ್ದಯ್ಯ ಮತ್ತೆ ಜಾನಕಿ ದಂಪತಿಯ ಮಂಜ (ಮಗ) 62 ವರ್ಷ ಪ್ರಾಯದ ಇವ್ರ್ ಸುಮಾರ್ 500ಕ್ಕೂ ಹೆಚ್ಚು ಅರೆಭಾಷೆ ಗೌಡ ಜನಾಂಗ ಬಾಂಧವರ ಕಷ್ಟ ಸುಖದ ಕಾರ್ಯಕ್ರಮಲಿ ಮುಖ್ಯಸ್ಥನಾಗಿ ಭಾಗವಹಿಸಿದ ಅಪಾರ ಅನುಭವವುಟ್ಟು. ಗೌಡ ಜನಾಂಗದ ಕಷ್ಟ ಸುಖದ ಕಾರ್ಯಕ್ರಮಲಿ ಅರೆಭಾಷೆ ಆಚಾರ–ವಿಚಾರಗಳ್‌ನ ಪಾಲಿಸಿಕಂಡ್ ಬರ್‌ತಾ ಒಳೊ. ಅರೆಭಾಷೆ ಸಂಸ್ಕೃತಿಯ ಜೀವಂತಿಕೆಗೆ ಕಾರಣಕರ್ತರಾದ ಇವ್ ಇಂದಿನ ಯುವ ಸಮೂಹಕ್ಕೆ ಮಾದರಿಯಾಗಿ ಒಳೊ.



### ಶ್ರೀ ಅಜರಂಗಲ ರಾಮಣ್ಣ – (ಕೃಷಿ)

ಇವ್ ಕೊಡಗ್ ಜಿಲ್ಲೆ ಸೋಮವಾರಪೇಟೆ ತಾಲೂಕಿನ ಸಿದ್ದಲಿಂಗಪುರ ಗ್ರಾಮಲಿ ಪ್ರಗತಿಪರ ಕೃಷಿಕತ ಗುರುತಿಸಿಕೊಂಡೊಳೊ. ಇವ್ ಸುಂಠಿಕೊಪ್ಪ. ಗ್ರಾಮದ ಅಜರಂಗಲ ದಿವಂಗತ ಸೋಮಪ್ಪ ಮತ್ತೆ ಕುಂಞಮ್ಮ ದಂಪತಿಯ ಮಂಜ. ಶುಂಠಿ ಕೃಷೀಲಿ ಬದುಕ್ ಕಟ್ಟಿಕಂಡ ಇವ್ ಕಾಫಿ, ಮೆಣಸು, ಸುವರ್ಣಗೆಡ್ಡೆ ಹಿಂಗೆ ಬೇರೆ ಬೇರೆ ಕೃಷಿನ ಮಾಡಿ ಒಬ್ಬ ರೈತ ಜೀವನಲಿ ಹೆಂಗೆ ಮುಂದೆ ಬರೋಕುತ ತೋರ್‌ಸಿ ಕೊಟ್ಟೊಳೊ. ಅನೇಕ ಸಂಘ –ಸಂಸ್ಥೆಲಿ ಗುರ್‌ತಿಸಿಕೊಂಡಿರೊ ಇವ್ ಸಮಾಜ ಸೇವೆಲು ಸನ ಮುಂಚೂಣಿಲಿ ಒಳೊ.



### ಕು। ಪಟ್ಟೆಮನೆ ನವನೀತ ಯು. (ಕ್ರೀಡೆ)
### ಅಂತರಾಷ್ಟ್ರೀಯ ಬಾಸ್ಕೇಟ್ ಬಾಲ್ ಆಟಗಾರ್ತಿ

28–07–1994ರಲ್ಲಿ ಜನಿಸಿದ ಇವ್ ಕೊಡಗ್ ಜಿಲ್ಲೆನ ಸುಂಠಿಕೊಪ್ಪ ಗ್ರಾಮದ ಪಟ್ಟೆಮನೆ ಉದಯಕುಮಾರ್ ಮತ್ತೆ ಗಿರಿಜಾ ದಂಪತಿಯ ಪುತ್ರಿ. ಸಮಾಜಶಾಸ್ತ್ರ ವಿಷಯಲಿ ಸ್ನಾತಕೋತ್ತರ ಪದವಿ ಪಡ್‌ದ ಇವ್ ಹಾಲಿ ರೈಲ್ವೆ ಇಲಾಖೆಲಿ ಉದ್ಯೋಗ ಮಾಡ್ತ ಒಳೊ. ಬಾಸ್ಕೆಟ್ ಬಾಲ್ ಆಟಗಾರ್ತಿಯಾದ ಇವ್ ಅಂತರಾಷ್ಟ್ರೀಯ ಮಟ್ಟಲಿ ಭಾರತ ತಂಡನ ಪ್ರತಿನಿಧಿಸೊಳೊ. ಇವ್‌ಕೆ 2014–2015 ಸಾಲಿನ ಏಕಲವ್ಯ ಪ್ರಶಸ್ತಿ ಸಿಕ್ಕುಟ್ಟು. ರಾಜ್ಯ. ರಾಷ್ಟ್ರ. ಮತ್ತೆ ಅಂತರಾಷ್ಟ್ರೀಯ ಮಟ್ಟಲಿ ಅನೇಕ ಪ್ರಶಸ್ತಿ ಸಿಕ್ಕುಟ್ಟು.



## ಶ್ರೀ ಪಿ. ಜಿ. ಅಂಬೆಕಲ್ – (ಸಾಹಿತ್ಯ)

ಇವ 1949 ಜುಲೈ ತಿಂಗಳ 21ರಂದ್ ದಕ್ಷಿಣ ಕನ್ನಡ ಜಿಲ್ಲೆ ಸುಳ್ಯ ತಾಲೂಕಿನ ಅಮರ ಮುಡ್ನೂರು ಗ್ರಾಮ ಪೈಲಾರನಲ್ಲಿ ಜನಿಸಿದ್. ಇವರ ತಂದೆ ಅಂಬೆಕಲ್ ವೆಂಕಪ್ಪ ಗೌಡ್ರ್ ಮತ್ತೆ ತಾಯಿ ರಾಮಕ್ಕ. ಸ್ನಾತಕೋತ್ತರ ಪದವಿ ಪಡೆದ ಇವ ಕೊಡಗ್ ಜಿಲ್ಲೆನ ಚೆಟ್ಟಳ್ಳಿ ಪ್ರೌಢ ಶಾಲೆಲಿ 25 ವರ್ಷ ಸಹ ಶಿಕ್ಷಕನಾಗಿ ಮತ್ತೆ 8 ವರ್ಷ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದ ಅನುಭವವುಟ್ಟು. ಇವರ ಮುಖ್ಯ ಆಸಕ್ತಿ ಸಾಹಿತ್ಯ ಮತ್ತೆ ನಾಟಕ ಕ್ಷೇತ್ರಲಿ. ಇವರ ಲೇಖನಗ, ಕವನ, ಕಥೆಗ. ಹಲವಾರು ಸ್ಮರಣ ಸಂಚಿಕೆಲಿ ಪ್ರಕಟವಾಗಿದ್. ಪ್ರಧಾನ ಸಂಪಾದಕರಾಗಿ ಕೆಲಸ ಮಾಡ್‌ದ ಅನುಭವವುಟ್ಟು. 1970ರಲ್ಲಿ ಪ್ರಕಟವಾದ ಕೊಡಗ ಮತ್ತೆ ದಕ್ಷಿಣ ಕನ್ನಡ ಗೌಡ ಸಮಾಜದ ಸ್ಮರಣ ಸಂಚಿಕೆಲಿ ಅರೆಭಾಷೆ ಲೇಖನ ಬರ್‌ದ ಕೀರ್ತಿ ಇವಕೆ ಸಲ್ಲುದೆ. ಇವ ಹಲವಾರು ಸಮಾಜಮುಖಿ ಕಾರ್ಯಲಿ ಭಾಗವಹಿಸಿದ್ದವೆ.



## ಶ್ರೀ ಹರಿಪ್ರಸಾದ್ ಅಡ್ಪಂಗಾಯ – (ಪತ್ರಿಕೋದ್ಯಮ)
### ನಿರೂಪಕ – ಟಿ.ವಿ.9 ಕನ್ನಡ

ಇವು ಸುಳ್ಯ ತಾಲ್ಲೂಕ್ ಅಜ್ಜಾವರ ಗ್ರಾಮದ ಅಡ್ಪಂಗಾಯ ಲಕ್ಷ್ಮಣ ಗೌಡ್ರ್ ಮತ್ತೆ ಸುಶೀಲ ದಂಪತಿಯ ಮಂಜ (ಮಗ). ಇವು ಹುಟ್ಟಿದ ದಿನ 22 ಸೆಪ್ಟಂಬರ್ 1981. ಇವು ಪ್ರಾಥಮಿಕ ಶಿಕ್ಷಣನ ಅಡ್ಪಂಗಾಯಲಿ, ಪ್ರೌಢ ಶಿಕ್ಷಣನ ಅಜ್ಜಾವರಲಿ ಮತ್ತೆ ನಂತರದ ಶಿಕ್ಷಣನ ನೆಹರು ಸ್ಮಾರಕ ವಿದ್ಯಾಲಯಲಿ ಮಾಡಿಯೊಳೊ. ಮಂಗಳೂರು ವಿಶ್ವವಿದ್ಯಾನಿಲಯಲಿ ಬಿಎಸ್ಸಿ ನಂತರ ಸಮೂಹ ಸಂವಹನ ಮತ್ತೆ ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡ್‌ದೊಳೊ. 2006ರಿಂದನೂ ಟಿವಿ9 ಸುದ್ದಿವಾಹಿನಿಯಲ್ಲಿ ವರದಿಗಾರನಾಗಿ ಕೆಲಸ ಮಾಡ್ತ ಒಳೊ. 2017ರ ಅಕ್ಟೋಬರ್‌ನಲ್ಲಿ ಟಿವಿ9 ಸುದ್ದಿವಾಹಿನಿಯ ಹಿರಿಯ ನಿರ್ಮಾಪಕನಾಗಿ ಸೇವೆ ಸಲ್ಲಿಸಿದ ಇವಕೆ 2017ರಲ್ಲಿ ದಕ್ಷಿಣ ಭಾರತದ ಭಾಷೆಗಳ ಅತ್ಯುತ್ತಮ ಆ್ಯಂಕರ್‌ತಾ ಹೇಳಿ ಇಎನ್‌ಬಿಎ ಅವಾರ್ಡ್ ಸಿಕ್ಕಿಟ್ಟು. (Exchange 4 Media ಕೊಡೊ News Broadcasting Award ENBA) ಇವಕೆ ಕರ್ನಾಟಕ ಮಾಧ್ಯಮ ಅಕಾಡೆಮಿಯ 2018ನೆ ಸಾಲಿನ ಅತ್ಯುತ್ತಮ ಆ್ಯಂಕರ್ ಪ್ರಶಸ್ತಿ ಸನ ಬಂದುಟ್ಟು.

## ಶ್ರೀ ನಂಗಾರು ನಿಂಗರಾಜು – (ಶಿಕ್ಷಣ)
### ನಿವೃತ್ತ ಪ್ರಾಂಶುಪಾಲರ್



ಇವು ಮೂಲತಃ ಕೊಡಗ್ ಜಿಲ್ಲೆ ಸೋಮವಾರಪೇಟೆ ತಾಲೂಕ್ ಸಂಗಯ್ಯನಪುರ ಗ್ರಾಮದವ್. ಇವ ನಂಗಾರು ರಾಮಯ್ಯ ಮತ್ತೆ ಮಾಚಮ್ಮ ದಂಪತಿಯ ಮಂಜ (ಮಗ). ಇವ ಪ್ರಾಥಮಿಕ ಶಿಕ್ಷಣನ ಸ್ವಂತ ಊರಾದ ಸಂಗಯ್ಯನಪುರ ಗ್ರಾಮಲಿ ಮಾಡಿಯೊಳೊ. ಪ್ರೌಢ ಶಿಕ್ಷಣ ಮುಗಿಸಿದ ನಂತರ ಉನ್ನತ ವ್ಯಾಸಂಗನ ಬೆಂಗಳೂರಿನಲ್ಲಿ ಮಾಡಿಯೊಳೊ. ಇವಕೆ 35 ವರ್ಷ ಉಪನ್ಯಾಸಕರಾಗಿ ಕೆಲಸ ಮಾಡ್‌ದ ಅನುಭವವುಟ್ಟು. ನಂತರ ಪ್ರಾಂಶುಪಾಲರಾಗಿ ಬಡ್ತಿ ಸನ ಪಡೆದೊಳೊ. ಇವರ ಸೇವೆನ ಗುರ್ತಿಸಿ, ಇವಕೆ ರಾಜ್ಯ ಸರ್ಕಾರದ ರಾಜ್ಯಮಟ್ಟದ ಉತ್ತಮ ಪ್ರಾಂಶುಪಾಲ ಪ್ರಶಸ್ತಿ ನೀಡಿ ಸನ್ಮಾನಿಸೊಳೊ.



## ಕು। ಅಮ್ಮಾಜೀರ ಹರ್ಷಿತ್ ಕೆ. – ಯುವ ಸಾಧಕ

ಇವ ಕೊಡಗ ಜಿಲ್ಲೆ ಸಿದ್ದಲಿಂಗಪುರ ಗ್ರಾಮದ ಅಮ್ಮಾಜೀರ ಕಿರಣ್‌ಕುಮಾರ್ ಮತ್ತೆ ಸವಿತಾ ದಂಪತಿಯ ಮಾಂಜ .(ಮಗ) ಕೊಡಗ ಜಿಲ್ಲೆ ಸೇರ್‌ದಂಗೆ ಪಶ್ಚಿಮ ಘಟ್ಟ ಪ್ರದೇಶಲಿ ಆನೆ ಹಾಂಗೆ ಬೇರೆ ಬೇರೆ ಪ್ರಾಣಿಗಳಿಂದ ಬೆಳೆದ ಬೆಳೆ ನಾಶವಾಗ್‌ತುಟ್ಟು. ಇವ ರೈತನ ಜಮೀನಿಗೆ ಪ್ರಾಣಿಗ ಬಂದರೆ, ರೈತನ ಮೊಬೈಲ್‌ಗೆ ಎಚ್ಚರಿಗೆ ಸಂದೇಶ ರವಾನೆ ಮಾಡುವಂತಹ ವಿಜ್ಞಾನ ಮಾದರಿಯನ್ನು ತಯಾರಿಸಿ ಒಳೊ. ಇವ 2018-19, 2019-20ನೇ ಸಾಲಿನಲ್ಲಿ ಎರಡುಸಲ ಇನ್ಸ್ಪೈರ್ (INSPIRE) ಅವಾರ್ಡ್ ಸ್ಪರ್ಧೆಯಲಿ ರಾಜ್ಯಮಟ್ಟದ ವಿಜ್ಞಾನ ಮಾದರಿ ತಯಾರಿಕೆಲಿ ಭಾಗವಹಿಸೊಳೊ. ಇವರ ಸಾಧನೆಗೆ ಮೆಚ್ಚಿ ಪಬ್ಲಿಕ್ ಟಿವಿಯವು "ಪಬ್ಲಿಕ್ ಹೀರೋ"ತ ಗುರ್ತಿಸಿಯೊಳೊ. ಇವಕೆ 2020ನೇ ಸಾಲಿನ ಕೊಡಗ ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನ ಪುರಸ್ಕಾರ ಮತ್ತೆ ವಿವಿಧ ಸಂಘ-ಸಂಸ್ಥೆಗಳ ಪುರಸ್ಕಾರ ಸಿಕ್ಕಿಟ್ಟು.

# ಇಂದ್‌ನ ಜನ ಎತ್ತ ಹೋಗ್ತ ಒಳೊ



–ಉದಯಕುಮಾರಿ ಚೆಂಬು

ಮೊನ್‌ಸರ್ ಆದ ನಾವ್ ಇಂದ್ ತಂತ್ರಜ್ಞಾನದ ಕಾಲಲಿ ಒಳೊ. ಇಂದ್‌ನ ಶಿಕ್ಷಣ ವ್ಯವಸ್ಥೆಲಿ ಬರೀ ವಿಚಾರಗಳ ತಿಳ್ದವೆ ಹೊರ್ತ್ ಮಾನವೀಯತೆನ ಕಲ್ತುದ್ಲೆ. ಎಷ್ಟೋ ತರದ ಕೆಟ್ಟ ಕೆಲ್ಸಗಳ್ಗೆ ಜೀಕಿಕೆ ಸಮಾಜ ಕೂಡ ಅದರ್ಲೇ ಅದ ಕೊಡುಗೆಗಳ ಕೊಟ್ಟುಟು. ಹಂಗಾ ಜನಗಳ ಬುಟ್ಟರೆ ಒಳ್ಳವೆಲ್ಲಾ ಅವರವರ ಆಸೆಗಳ ತೀರ್ಸಿಕೆ ಬಂಗ ಬರ್ತ ಒಳೊ. ಅವರವರ ಗುರಿ ಮುಟ್ಟಿಕೆ ಹೇಳಿ ಕೊಡೊವು ಇದ್ದರೂ ಅದರ ಪಾಲನೆ ಮಾಡ್‌ವ ಮನ್ಸ್‌ಗ ಇರ್ತುಲೆ. ಕೈಲಿ ಇಡೀ ಜಗತ್ತನ್ನೇ ನೋಡ್‌ವ ತಾಕತ್ತ್ ಇದ್ದರು ನಾವ್ಗೆ (ನಕೆ) ನೆರೆ ಕರೆ ಮನೆವರ ಪರ್ಚಯ ಇರ್ತುಲೆ. ಇಂದ್‌ನ ದಿನಲಿ ತರ ತರದ ಅನ್ಯಾಯಗ ನಡಿವರ ನಾವ್ ನೋಡ್ತ ಒಳೊ. ಸಣ್ಣ ಪ್ರಾಯದ ಮಕ್ಕ ಶಿಕ್ಷೆ ಅನ್‌ಭವಿಸುವರ ಕೂಡ ನಾವ್ ನೋಡ್ತ ಒಳೊ. ಇಂದ್ ಮನೆಗಳ್ಲಿ ಮೊನ್‌ಸರ ಸಂಖ್ಯೆ ದಿನ ಕಳ್ದಾಂಗೆ ಎರ್ಡ್ ಮೂರ್ ಜನ ಇರ್‌ವಾಂಗೆ ಆವುಟು.

ಹಿಂದ್‌ನ ಕಾಲಲಿ ಹಿರಿಯರ್‌ಂದ ಕೂಡ್ದ ಕುಟುಂಬ ಇದ್ದ್ ಅಜ್ಜ–ಅಜ್ಜಿಕ ಮಕ್ಕ, ಮೊರಿಮಕ್ಕಳ್‌ಗೆ ಒಳ್ಳ ಸಂಸ್ಕೃತಿ ವಿನಯವಂತಿಕೆನ ಹೇಳಿ ಕೊಡ್ತಿದ್ದೊ. ಈಗ ಮನೆಲಿರುವ ಅಪ್ಪ–ಅಮ್ಮಂದರ್‌ಗೆ ಕೆಲ್ಸದ ಒಂಟಿಪೂರ್. ಹಂಗಾಗಿ ಮಕ್ಕಳ ಗೋಜಿಗೆ ಹೋದ್ದ್ಲೆ. ಕೇಳ್ದಷ್ಟ್ ದುಡ್ಡ್ ಕೊಟ್ಟ್ ಅವರ ಹೊರೆನ ಕಡ್ಮೆ ಮಾಡಿಕಂಬ ಹೆತ್ತವ್ ಜಾಸ್ತಿ. ಇದರ್‌ಂದ ಮಕ್ಕಳ್‌ಗೆ ಸುಸಂಸ್ಕೃತಿ ಗುಣ ಬಾಕಿ ಬಂಗ ಆಗ್ತ ಉಟ್ಟು. ಇಂದ್‌ನ ದಿನಲಿ ವಿದ್ಯೆ ಕಲ್ತವ್ ಜಾಸ್ತಿ ಇದ್ದರೂ ಅವ್ ಬರೀ ಸ್ವಾರ್ಥಿಗಳೇ ಆಗಿದ್ದವೆ.

ಇಂದ್‌ನ ಕಲಿಯ್ಗೆ ಪ್ರೀತಿ, ಮಮತೆ, ಗೌರವ ಈ ಪದಕ್ಕೆ ಅರ್ಥನೇ ಗೊತ್ತಿರ್ತುಲೆ. ಹಿಂಗಾಗಿ ಮಾನವೀಯ ಭಾವನೆಯ ಬೆಲೆ ಬಿದ್ದ್ ಹೋಗ್ತುಟ್ಟು.

ಇಂದ್‌ನ ಜಗತ್ತ್‌ಲಿ ಸಿಕ್ಕುವ ಅತ್ಯಮೂಲ್ಯ ಕೊಡುಗೆ ಯಾಂತ್ರಿಕತೆ. ಶರೀರಲಿರುವ ಎಲ್ಲಾ ನರನಾಡಿಗ ಯಂತ್ರಂದ ನಡಿತ ಉಟ್ಟು. ಇಂದ್‌ನವ್ಕೆ ಸರಿಯಾಗಿ ಹೋಪ್ಕುವ ದಾರಿ ಗೊತ್ತಿಲ್ಲದಕ್ಕೆ ಭವಿಷ್ಯದ ಬಗ್ಗೆ ಕನ್ಸ್‌ಗ ಇರ್ತುಲೆ ಇದ್ಕೆ ನಮ್ಮ ಈ ಲೋಕ ಸಮಾಜವೇ ಕಾರಣ ಹೇಳಿರೆ ತೊಪ್ಪಾಕಿಲೆ.

ಇಂದ್ ದೂರದರ್ಶನ, ಧಾರವಾಹಿಗಳ್‌ಂದ ಹಿಡ್ದ್ ಸಿನಿಮಾದವರೆಗೆ, ಕಾಲೇಜ್ ಹೇಳಿರೆ ಮಜ ಮಾಡ್‌ವ ಜಾಗಂತ ತಿಳ್ಕಂಡವೆ.

ನಮ್ಮ ಜೀವನ ಸಿನಿಮಾದ ಹಂಗೆ ಮೂರ್ ಗಂಟೆಗೆ ಮುಗಿದ್ದ್ಲೆ ಈ ಕಾಲೇಜ್ ಸಮಯ ಭವಿಷ್ಯದ ಜೀವನಕ್ಕೆ ಭದ್ರಬುನಾದಿ ಹಾಕ್‌ವ ಕಾಲ ಆವುಟು. ಆದ್ರೆ ಇಂದ್‌ನ ಕಾಲೇಜ್ ಮಕ್ಕ, "ಕಾಲೇಜ್ ಲೈಫ್ ಈಸ್ ಗೋಲ್ಡನ್ ಲೈಫ್"ತ ನಂಬಿ ಮಜ ಮಾಡ್ತ ಒಳೊ. ಕೆಲವರ ಬುಟ್ಟರೆ ಉಳ್ದವೆಲ್ಲ ನಷ್ಕಕ್ಕೆ ಬೀಳ್ತ ಒಳೊ. ಲಾಯ್ಕನ ಬೊಮ್ಮ ಕಟ್ಟಿಕ ಆಗದೆ ಹಾಳ್ ಆಗ್ತ ಒಳೊ. ಇದೊಂದ್ ದುರಾದೃಷ್ಟ.

"ಮನುಷ್ಯನಾಗಿ ಹುಟ್ಟಿರೆ ಸಾಲದು, ಮನುಷ್ಯನಾಗಿ ಬದುಕಲು ಕಲಿಯಬೇಕು" ಮಹಾತ್ಮಾ ಗಾಂಧಿ, ಗೌತಮ ಬುದ್ಧ, ರಾಮಕೃಷ್ಣ ಪರಮಹಂಸ, ವಿವೇಕಾನಂದರ್ ಸಾರ್ದ ಮೌಲ್ಯಗ ಇಂದ್‌ನವ್ಕೆ ಗೊತ್ತೇ ಇಲ್ಲೆ. ಹೊಪ್ಪುವ ಮೌಲ್ಯಗಳ ಈ ಪುಣ್ಯಾತ್ಮರ್ ಬುಟ್ಟ್ ಹೋದರು ಪ್ರೇಜನಕೆ ತಕಂಬಂತ ತಲೆಗ ಬಾರಿ ಕಡ್ಮೆ.

ಅದರ ಬದ್ಲ್ ಇಂದ್‌ನ ಅಂತರ್ಜಾಲ, ಮೊಬೈಲ್, ಕುಡ್ತ, ನೀಲಿ ಚಿತ್ರ, ಪ್ರೀತಿ ಪ್ರೇಮ, ಅಮಲ್ ವಸ್ತುಗಳ ಹಿಂದೆ ಬಿದ್ದವೆ. ಇದ್ಕೆ ಬಡೊವ್, ಶ್ರೀಮಂತರ್ ಯಾವ ಬೇದ ಇಲ್ಲೆ. ಇದ್ಕೆ ಬಲಿ ಆದು ಹದಿನೆಂಟ್ ವರ್ಷಂದ ನಲ್‌ವತ್ತ್ ವರ್ಷದವ್ ಜಾಸ್ತಿ. ಇದರ ಹಿಂದೆ ಬಿದ್ದು ಸರಿ ದಾರಿಲಿ ನಡಿಕೆ ಆಗದೆ ಅವರ ಕನಸ್‌ಗೆಲ್ಲಾ ಕನಸ್ ಆಗಿ ಒಳ್ದದೆ. ಕೆಲವ್ ಕಾಲೇಜ್ ಹಕ್ಕಲ್ ಅಮಲ್ ವಸ್ತುಗ. ಹಂಗಾ ಹೊತ್ತು ಸುಖದ ಅಮಲ್‌ಗೆ ಅವರವರ ಜೀವನ ಬಲಿ ಕೊಡ್ತ ದುರಾದೃಷ್ಟ. ಇಂತ ಅಮಲ್ ಬರ್‌ವ ವಸ್ತುಗಳ ಮಾರದ ಹಂಗೆ ಸರ್ಕಾರ ಕಾನೂನ್ ತಂದರೂ ಮೊನ್‌ಸರ್ ಬಲಿ ಆದು ಕಡ್ಮೆ ಆತ್ಲೆ. ಇಡೀ ಜಗತ್ತ್‌ಲೇ ನಡಿವ ಆಗು ಹೋಗುಗಳ ನೋಡಿಕೆ ಮೊನ್ಸ ಬೇರೆ ಬೇರೆ ಸಂಶೋಧನೆಗಳ್‌ಂದ ಅಂತರ್ಜಾಲನ ಕಂಡ್‌ಹಿಡ್ದ್. ಈಗ ಅಂತರ್ಜಾಲಲಿ ಕಾಲ ಕಳ್ಕಂಡ್ ಇರ್ತು ಬೇಜಾರದ ಸಂಗತಿ. ಚಾಟ್ಸ್ ಚಾಟ್, ವೀಡಿಯೋ, ಇ-ಮೇಲ್, ಗೇಮ್ಸ್, ಹಿಂಗೆ ಎಷ್ಟೋ ತರಲಿ ಅವರವರ ಹೊತ್ತ್‌ನ ಕಳೆತಾ ಒಳೊ. ಅದರ ಅಗತ್ಯ ಇಲ್ಲದರು ಕೂಡ ಅವರವರ ಮಕ್ಕಳ್‌ಗೆ ತೆಗ್ದ್ ಕೊಡ್‌ವ ಹೆತ್ತವ್ ಮಕ್ಕಳ ತಪ್ಪು ದಾರಿಗೆ ಎಳೆತ ಒಳೊ. ಕೆಲವ್ ಕಾಲೇಜ್‌ಗಳ್ಲಿ ಅಂತರ್ಜಾಲ ಕೇಂದ್ರ ಇರ್ದದರ ನೋಡಕ್.

ಇನ್ನೊಂದ್ ಮೊಬೈಲ್, ಇದ್ ಮೆಸೇಜ್, ಕರೆಗಳಿಗೆ ಮಾತ್ರ ಅಲ್ಲ ಅನಾವಶ್ಯಕ ಚಾಟಿಂಗ್, ಪರಿಚಯ ಇಲ್ಲದವರ

ಬಟ್ಟಿಗೆ ಮಾತಾಡ್ತು ಗೂಡೆ. ಹೈದಗಕಗೆ ಪ್ರೀತಿ ಬೆಳ್ದ್ ಮತ್ತೊಂದ್ ದಿನ ಒಳ್ಳ ಮನ್ಸ್‌ಗಳ ನೆಡುಮಾರ್ಗಲಿ ಹಾಳ್ ಮಾಡ್‌ವಂತ ಕತೆ ಎಷ್ಟೋ ನಡಿತ ಉಟ್ಟು. ಇಂದ್‌ನವ್ಕ ಒಂದ್ ನಿಮಿಷ ಮೊಬೈಲ್ ಇಲ್ಲದರೆ ಜೀವನನ ಕಳ್ಕೊಂಡವರ ಹಂಗೆ ಮುಚ್ಚಿಗಟ್ಟವೆ. ಇನ್ನ್ ಕೆಲವ್ ಜನ ಕುಡ್ತಂದ ಹಾಳಾದವೆ. ಇದರ್‌ಂದ ಜಗಳ, ಅಪಘಾತ, ಗಂಡ-ಹೆಣ್ಣ್‌ನ ಬುಡ್‌ಗಡೆಗೆ ಕಾರಣ ಆದ್. ಕೆಲವ್ ಮಕ್ಕ ಪರೀಕ್ಷೆಲಿ ಪಾಸ್ ಆದ ಕುಸಿಗೆ ಕುಡ್ದರೆ ಮತ್ತೆ ಕೆಲವ್ ಫೇಲ್ ಆಕನ ಬೇಜಾರ್‌ನ ಕಳಿಯಕೆ ಕುಡ್ತವೆ. ಕೆಲವ್ ಜೋಡ್ತಿಗಳ ಒತ್ತಾಯಕೆ ಕುಡ್ದ್ ಮಜ ಮಾಡುವೆ. ಮತ್ತೊಂದ್ ದಿನ ಸಾವ್‌ನ ಕಂಡವೆ.

ಹೇಳಕಂಡ್ ಹೋದರೆ ನೀಲಿ ಚಿತ್ರನ ನೆಂಪಾದೆ. ಇಂದ್‌ನವ್ ನೀಲಿ ಚಿತ್ರದ ಹಿಂದೆ ಹೋಗ್ತ ಒಳೊ. ರಿಯಾಲಿಟಿ ಶೋ, ಸಿನಿಮಾ, ಇದೆಲ್ಲ ಒಳ್ಳ ಕೆಲ್ಸಂದ ಜಾಸ್ತಿ ಕೆಟ್ಟ ಕೆಲ್ಸಗಳ ಮಾಡ್ತಿದೆ. ಸೋಲು, ನಿರಾಸೆ, ಬೇಜಾರ, ಕಳೆಕೆ ಮಜಕ್ಕಾಗಿ ಬಳ್ಳಿ ಜೀವನಲಿ ಸರ್ನೊವ್ ಒಳೊ. ಹಂಗನೇ ಮಾಧ್ಯಮಲಿ ಬರ್‌ವ ಜಾಹೀರಾತ್‌ಗ ಇಂದ್‌ನವರ ದಾರಿ ತಪ್ಪ್‌ಸಿದೆ.

ಪ್ರೀತಿ-ಪ್ರೇಮ ಗೂಡೆ ಹೈದ ನೋಡ್ತ ಕೂಡ್ಲೆ ಪ್ರೀತಿ ಬೆಳ್ತದೆ. ಮನ್ಸ್‌ಗ ಒಂದಾದೆ. ತಿಂಗಳ್ಲಿ ಹುಟ್ಟಿದ ಪ್ರೀತಿ 25 ವರ್ಷಂದ ಸಾಕಿದ ಅಪ್ಪ-ಅವ್ವನ ಮರ್ತ್ ಓಡಿ ಹೋಗುವಷ್ಟರ ಮಟ್ಟಿಗೆ ತಲ್ಪಿದೆ. ಪ್ರೀತಿಸಿದವ್ ಸಿಕ್ಕದರೆ ಸಾಯುವ ನಿರ್ಧಾರ ಮಾಡುವೆ. ಇದೆಲ್ಲ ನಮ್ಮ ಬಾಳ್‌ನ ನಾವೇ ಹಾಳ್ ಮಾಡ್‌ವಂತದ್. ಅದರ ಬದ್‌ಲ್ ಮನ್ಸ್‌ನ ಮಲ್ಲಿಗೆನ ಹಂಗ ಮೆತ್ತನೆ ಆಗಿಸಿ ಮಾನವೀಯತೆಗೆ ಹೊಂದಿಕಂಡ್ ಹೋಗ್‌ವಂತ ಮನ್ಸ್ ಬರ್ಲಿ-ಇರ್ಲಿ. ಇದ್ ನನ್ನ ಆಸೆ. ❑

## ರೈತನ ಬದುಕ್

**– ಪೆರಿಯನ ಹರ್ಷಿತಾ ಕೇಶವ**
ಮರಗೋಡು ಗ್ರಾಮ ಮತ್ತು ಅಂಚೆ

ಮಳೆಗಾಲದ ಮಳೆಲಿ
ಮೈ ನಡುಗ್ನೋ ಸಳಿಲಿ
ಬೊಳ್ಪು ಕೋಳಿ ಕೂಂಗೋಮೊದ್ಲೆ
ನಿದ್ರೆಂದ ಎದ್ದ್ ಕರಿಕಾಫಿ ಕುಡ್ದ್
ಹಟ್ಟಿಂದ ಜೋಡೆತ್ತುಗಳ ಹೊಡ್ಕಂಡ್
ನೇಗಿಲು ನೊಗನ ಹೆಗಲು ಮೇಲೆ ಹೊತ್ತ್‌ಕಂಡ್
ಹೋಗ್ತಿದ್ದೆ ನಾನು ಗದ್ದೆ ಹೂಡಿಕೆ
　　ಹಳೆವ್ ಒಂದ್ ಕೋಟ್, ತುಂಡು ಚಡ್ಡಿ,
　　ತಲೆಮೇಲೆ ಗೊರ್ಗ, ಕೈಲಿ ನೆಕ್ಕಿ ಕೋಲು
　　ಹೂಡಿಕೆ ಸುರು ಮಾಡ್ದೆ
　　ಹೀ ಹೀ ಬಾ, ಅರೆ ಹೋತ ರಾಗಲಿ
ಮಳೆಗೆ ನೆಂದ್, ಸಳಿ ಹಿಡ್ದ್
ನೇಗಿಲು ಎಳ್ದ್ ಹೆಗಲು ಬೇನೆಲೂ
ಬೆನ್ನಿಗೆ ನೆಕ್ಕಿ ಕೋಲುನ ಬರೆ
ಎತ್ತುಗಳಿಗೆ
　　ಬರ್ತಿದ್ದೊ ಮನೆಂದ
　　ಬಳಿಬುಟ್ಟಂಗೆ ಗದ್ದೆಗೆ
　　ಸಣ್ಣ ಚೊಂಬುಲಿ ಕರಿಕಾಫಿ ಹಿಡ್ಕಂಡ್
　　ಎತ್ತುಗಳ ನಿಲ್ಸಿ ಕಾಫಿ ಕುಡ್ದು ಕೊಟ್ಟ್,
ಮೈಯೆಲ್ಲ ಮೆತ್ತಿದ ಕೆಸರು
ಪಿರಿ ಪಿರಿ ಮಳೆಗೆ ಗೊರ್ಗ ಹಾಕದೆ ನೆಂದ್
ಬಟ್ಟೆನೂ ಪೂರ
ಚಂಡಿಯಾಗಿ ಸಳಿ ಹಿಡ್ದಿತ್ತ್
　　ಕಾಫಿ ಕುಡ್ದ್
　　ಮೈ ಸ್ವಲ್ಪ ಬೆಚ್ಚಂಗೆ ಮಾಡಿಕಂಡ್
　　ಮತ್ತೆ ಸುರು ಮಾಡಿದೆ ಹೂಡಿಕೆ
　　ಹೋ ಹೋ ಅರೆ ಹೋತ ರಾಗಲಿ
ಗಂಟೆ ಎಂಟಾತ್
ಎತ್ತುಗಳಿಗೆ ಬುಳ್ಗು ಹುಲ್ಲು,
ಹಲಸಿನ ಕಾಳು ಪೊಜ್ಜೆ
ಬಿಸಿ ಬಿಸಿ ಪೊಕ್ಕಳ ರೊಟ್ಟಿ
ಹೊಟ್ಟೆ ತುಂಬಾ [illegible]
　　ಪುಣಿ ಮೇಲೆ ಹುಲ್ಲು ಹಾಕಿ
　　ಎತ್ತುಗಳ ನಿಲ್ಸಿ
　　ತೋಡುಲಿ ಕೈಕಾಲು ತೊಳ್ಕಂಡ್
　　ಉಂಬಕೆ ಕೂರ್ತಿದ್ದೆ
　　ಒಂದ್ ತಿಂದ್ರೆ ಸಾಲ್ದ್,
　　ಎರ್ಡ್ ತಿಂದ್ರೆ ಆಗದ್
　　ಮೂರು ರೊಟ್ಟಿ ತಿನ್ನೊಕುತ
ಮತ್ತೆ ಪುನಾ ಹೂಡಿಕೆ ಇತ್ತ್
ರೊಟ್ಟಿ ತಿಂದ ಮೇಲೆ,
ಸುಸ್ತಾದ ಎತ್ತುಗ ಕಾಲೆಳೆಯದೇಲೆ
ಕೈಲಿದ್ದ ನೆಕ್ಕಿ ಕೋಲು ಸುಮ್ಮನೆ ಇದ್ರುಲೆ
ಹಂಗೊ ಹಿಂಗೊ ಹೂಡಿ ಆತ್
ಎತ್ತುಗಳ ನೊಗ ಬಿಚ್ಚಿ ಬುಟ್ಟೆ
ನೀರು ಹಾಕಿ ಮೈಲಿದ್ದ ಕೆಸರೆಲ್ಲಾ ತೊಳ್ದ್ ಮೇಯಕೆ ಬುಟ್ಟೆ ಅವ್ವ
ಕುಸಿಲಿ ಹೋದ್ರೊ
　　ಮೈಯಲ್ಲ ಕೆಸರು ಮೆತ್ತಿಕಂಡ್
　　ಬಟ್ಟೆನು ಚಂಡಿಯಾಗಿ
　　ಸಳಿ ಹಿಡ್ದ್ ನಡುಗ್ತಾ
　　ಗುಡ್ಡಕೆ ಹೊಗಿ
　　ಕೆಸರು ಬಟ್ಟೆ ಬಿಚ್ಚಿ ಹಾಕಿ
　　ಹಂಡೆಲಿ ಕಾದಿದ್ದ ಬಿಸಿ ನೀರು
　　ಮೈಗೆ ಹೊಯ್ಕಂಡ್ರೆ ಒಂದು ಕುಷಿ
ರೈತನೊಟ್ಟಿಗೆ ದುಡ್ದ ಎತ್ತುಗಳ
ಮರೆಯಕಾಗದಾ
ಮೂಕ ಪ್ರಾಣಿನ ಪ್ರೀತಿ
ಮಿತಿಯಿಲ್ಲದ್
ಅವೇ ನಮ್ಗೆ ಅನ್ನ ಕೊಟ್ಟ ದೇವ್ರು ❑

# ಚಾವಡಿ ಮನೆ ಗೌಡ್ರು

–ಕುಕ್ಕನೂರು ರೇಷ್ಮ ಮನೋಜ್
ಕುಶಾಲನಗರ

ರಾಮಣ್ಣ ಗೌಡ್ರ ಮನೇಲಿ ಅಂದು ತುಂಬ ಖುಸಿ. ಗದ್ದೆ ಹೂಡಿಕೆ ಮೇಲ ಮನೆ ಶೇಷಪ್ಪ, ಹಳೆಮನೆ ವೆಂಕಪ್ಪ, ಕಾಗಡೆ ಮನೆ ಧರ್ಮ, ಮೂಲೆಮನೆ ಸೀತಾರಾಮ ಹಿಂಗೆ ಎಳೆಂಟು ಮನೆ ಜನ ಬಂದಿದ್ರೊ. ಓ... ಹೋ... ಹೊಯ್'ತ್ರ ರಾಗಲಿ ಜೋಡೆತ್ತುಗ ಸಾಲ್'ಲಿ ಹೂಡ್ದು ನೋಡಿಕೆ ಅದೆಷ್ಟು ಲಾಯ್ಕ. ಎತ್ತುಗಳ್ ಜೊತೆ ಕಂಬಳ, ಕಂಬಳ ಆಟ ಆದಿ ಗೆದ್ದವ್'ಕೆ ರಾಮಣ್ಣ ಗೌಡ್ರು ಬಹುಮನಾಂತ ಒಂದು ದೊಡ್ಡ ಕವೆ ಬಾಳೆಗೊನೆ, ಹತ್ತು ಬೊಂಡ ಕೊಡ್ದು ಸಂಪ್ರದಾಯ. ಹಂಗೆ ಅಂದು ಕೂಡ ಆಟಗ ಇದ್ದೊ. ಚಳ್ಳೆಪಿಳ್ಳೆ ಮಕ್ಕ ಗದ್ದೆಲಿ ಓಡಿಕೆ. ಗಂಡ್'ಸ್'ರ್'ಗೆ ಎತ್ತುಗಳ ಜೊತೆ ಓಡ್ದ ಸ್ಪರ್ಧೆ ನಡ್ದು ಶೇಷಪ್ಪಂಗೆ ಪ್ರೈಜ್ ಕೂಡ ಬಾತು. ಎಲ್ಲಾ ಆಡಿ ಕೂಣ್ದು ಆಕನ ಮಧ್ಯಾಹ್ನ ಒಂದು ಗಂಟೆ. ಎಲ್ಲವ್'ಕೆ ಹೊಟ್ಟೆ ತಾಳ ಹಾಕಿಕೆ ಸುರುಮಾಡಿಕನ ರಾಮಣ್ಣನ ಗೌಡ್ರು ಇನ್ನು ಮನೆಗೆ ಹೋಯಿ ಹಸಿವಾದೆತ ಹೇಳ್ದೊ. ಎಲ್ಲಾ ಅಲ್ಲೆ ಇದ್ದ ಕೆರೆಗೆ ಹಾರಿ ಮೀದ್ ಚಂಡಿ ಬಟ್ಟೆನ ಹಿಂಡಿ ಮತ್ತೆ ಅದ್'ನೇ ಹಾಕ್ಕಂಡ್ ಬೈರಾಸ್'ಲಿ ತಲೆ ಒರ್ಸಿಕಂಡ್ ಮನೆಗೆ ಬಂದೊ. ಚಾವಡಿ ಮನೆ ಗೌಡ್ರ ಮನೆಲಿ ನಡೆವ ಸಂಭ್ರಮಕ್ಕೆ ಊರೇ ಸಾಕ್ಷಿಯಾಗ್'ತ್ತಿತ್.

ಮನೇಲಿ ಗೌಡ್ರ ಹೆಣ್ಣು ರಾಧಮ್ಮ ಮಾಡ್ದ ಎಲ್ಲ ಅಡ್'ಗೆನಾ ಹಿರಿಯವ್'ಕೆ ಬಾಳೆ ಎಲೆಲಿ ಬಡ್ಸಿ ಜೆಸಗೆಲಿ ಇಟ್ಟ್ ಊಟಕ್ಕೆ ಕರ್'ದತ್. ಎಲ್ಲವೂ ಸಾಲ್'ಲಿ ಪಂತಿಮಣೆಲಿ ಕುದ್ದು ಸುರ್ ಸುರ್'ತ ಗಂಜಿ ಬಡ್'ಸ್'ಕಂಡ್ ಉಂಡೊ. ರಾಧಮ್ಮ ಮಾಡ್ದ ಕಣಲೆ ಹಲ್'ಸ್'ನಕ್ಕಿ ಸಾರು, ಒಣಗಿಲ್ ಮೀನು, ಕಾಳು ಪಲ್ಯ, ಕೋಳಿಸಾರು, ರೊಟ್ಟಿ, ಹೆಸ್ರು ಬೇಳೆ ಪಾಯ್ಸ ಎಲ್ಲ ಹೊಗಳ್'ಕಂಡ್ ವಾಪಸ್ ಹಾಕಂಡ್ ತಿಂದ ಖುಸಿಗೆ ಎಲ್ಲ ಗುಡಾಣ ಹೊಟ್ಟೆಂದ ಡರ್'ಂತ ತೇಗು ಬಾತಿತ್ತು. ಹಾಂಗೆ ಮನೆ ಮುಂದೆ ಇದ್ದ ಜಗ್'ಲಿಲಿ ಕುದ್ದು ಎಲೆ ಅಡ್ಕೆ ಬಾಯ್ಗೆ ಹಾಕೊಂಡೊ. ಗೌಡ್ರು ಕೂಡ ಅಲ್ಲೆ ಇದ್ದ ಚೇರ್'ಲಿ ಕುದ್ದು 'ಹೇಂಗಾರು ಮಾಡಿ ನಾಳೆ ನಾಡಿದ್'ಲಿ ನಾಟಿ ಮಾಡಿ ಮುಗಿಸೋಕು. ಏನೋ ದೇವ್ರ ದಯೆ ಇಂದು ಮಳೆ ಕಡ್ಮೆ. ನಾಳೆನೂ ಬಿಸಿ ಬುಟ್ಟರೆ ಒಳ್ಳೆದಿತ್ತು. ಹತ್ತು ದಿನಲಿ ಆಟಿ ತಿಂಗ ಮುಗ್'ದದೆ. ಅದ್'ಕೆ ಮುಂದೆ ಗುಳಿಗಂಗೆ ಬಡ್'ಸೋಕು. ಅಂವನ ಆರಾಧನೆ ಮಾಡಿರೆ ಅಂವ ನಮ್ಮ ಭೂಮಿ ಕಾದದೆ. ಹಂಗೆ ಭೂತ ಚಾವಡಿ ಮೇಲೆ ಗಾಳಿ ಮಳೆಗೆ ಬಿದ್ದ ಹಲ್'ಸಿನ ಮರನ ಕಡ್ಸೋಕು. ಚಾವಡಿ ಮಾಡು ಪೂರಾ ಮುರ್ದು ಹೋಯ್ತು. ಆಚಾರಿ. ಮೇಸ್ತ್ರಿ ನಾಕು ದಿನ ಬುಟ್ಟು ಬಂದವೆ. ಈ ವರ್ಷ ಕೋಲ ಕೊಡಿಕೆ ಉಟ್ಟು. ಜನವರಿಗೆಲ್ಲಾ ರೆಡಿ ಆದರೆ ಒಳ್ಳೆದಿತ್. ಬ್ರಹ್ಮಕಲಸ, ಶುದ್ಧಿ ಕಾರ್ಯ ಮಾಡೋಕುತಾ ಅಷ್ಟಮಂಗಲ ಪ್ರಶ್ನೆಲಿ ಕಂಡುಟು. ಇಲ್ಲರೆ ಮನೆಗೆ ದೋಸಾತ ಹೇಳ್'ಯ್ತಿಳೋ. ದೇವ್ರ ಯಾವ ತೊಂದ್ರೆ ಬಾರದಿರಲೀತ' ಯೋಚ್ನೆ ಮಾಡ್ತ ಕುದ್ದ ಗೌಡ್ರುಗೆ ಹಂಗೆ ನಿದ್ದೆ ಬಂದು ಜಗ್'ಲಿಲಿ ಮಲ್'ಗಿ ಗೊರ್ಕೆ ಹೊಡೀಕೆ ಸುರು ಮಾಡ್ದೊ.

ಫೋನು ಒಂದೇ ಸಮ ಬಡ್'ಕಣೆಕೆ ಸುರು ಮಾಡಿಕನ ಗೌಡ್ರಿಗೆ ಎಚ್ಚರಾತು. ಬಂದವ್ ಎಲ್ಲ ಮನೆಗೆ ಹೋಗಿ ಆಗಿತ್. 'ಹಲೋ ಯಾರ್ ಮಾತಾಡ್ದ' ಅಂತ ಬಾಯ್ ಆಕಳಿಸಿಕಂಡ್ ಕೇಳ್'ಕನ ಅತ್ತ ಕಡೆಂದ ಟುಸ್'ಪುಸ್'ಂತ ಹೇಳ್'ವ ಇಂಗ್ಲೀಷ್ ಗೌಡ್ರಿಗೆ ಅರ್ಥ ಆತ್ಲೆ. 'ಅಪ್ಪಿ ಎಲ್ಲಿ ಒಳ... ಬಾ... ಅದೇನೋ ಹೇಳ್'ವೆ' ಕರ್ದ ಅಪ್ಪನ ಬಾಯಿಗೆ ಮಂಜ ಅಶೋಕ ಓಡಿ ಬಾತು. ಅಶೋಕ ಹಲೋ ಹೇಳಿ ವಿಷ್ಯ ಕೇಳಿಕೆ ಅತ್ತಂದ ಬಂದ ಸುದ್ದಿ ಅವ್'ನ ಬಾಯಿ ಪಸೆ ಆರಿ ಹೋತು. "ಅಪ್ಪಾ–ಜಮ್ಮುಲಿ ಬಾವ ಕೆಲ್'ಸಲಿ ಇರ್'ಕನ ಪಾಕಿಸ್ತಾನ ಉಗ್ರನ ಗುಂಡು ಅವ್ರುಕೆ ತಾಗಿ ಹೋದ ಗಡ"ತ ಮರ್'ಡಿಕೆ ಸುರು ಮಾಡ್ತ್. "ಅಯ್ಯೋ ನಿತ್ಯಾ ಮಗಳೇ ನಿಂಗೆ ಇನ್ನು ಯಾರ್ ದಿಕ್ಕು ಮೂರು ವರ್ಸದ ಕೂಸುನ ಹಿಡ್'ಕಂಡ್ ಹೆಂಗೆ ಜೀವ್ನ ಮಾಡ್ತ್ಯ"ತ ಎದೆ ಬಡ್'ಕಂಡ್ ಗೌಡ್ರು ಕೂಡ ಮರ್ಡಿಕೆ ಸುರು ಮಾಡ್ದ. ಹಿತ್ಲಲಿ ಬಟ್ಟೆ ಒಗ್ತಿತ್ತಿದ್ದ ರಾಧಮ್ಮ ಓಡಿ ಬಂದು ವಿಸ್ಯ ತಿಳ್ದ ಸೊಂಯ ತಪ್ಪಿ ಬಿದ್ದೊ. ಆಗ ತಾನೆ ಮನೆಗೆ ಹೋಗ್'ತಿದ್ದ ಜನ ರಂಪಾಟ ಕೇಳಿ ಓಡಿ ಬಂದೋ. ಎಷ್ಟು ಕುಸೀಲಿ ಇದ್ದ ರಾಮಣ್ಣಂಗೆ ಎಂತ ಸುದ್ದಿ ಬಾತು. ಛೇ... ಹಿಂಗೆ ಆಕೆ ಬೊತ್ತೂತ ಮಾತಾಡ್'ಕಂಡ್ ಅವ್ರ ಸಮಧಾನ ಮಾಡಿಕೆ ಸುರು ಮಾಡ್ದೊ. ಮಗಳು ನಿತ್ಯಾನ ಗೌಡ್ರು ಭಾಗಮಂಡಲ್'ಲಿ ಇರ್ದ ತಂಗಿ ಮಂಜ ಇಷ್ಟ ಪಟ್ಟ್ ಅಮ್ಮನ ಕೈಲಿ ಹೇಳ ಕಳ್ಸ್'ಕನಾ ಸೋದರ ಸಂಬಂಧಾತ ಒಪ್ಪಿ ಮಿಲಿಟ್ರಿಲಿ ಗಡಿ ಕಾಯ್ದು ಕೆಲ್ಸದ ಅಳಿಯಂಗೆ ಮದ್ವೆ ಮಾಡಿ ಕೊಟ್ಟಿದ್ದೊ. ಮದ್ವೆ ಆಗಿ ನಾಕುವರ್ಸ ಆತಷ್ಟೆ. ಲಾಯ್ಕ್'ಲಿ ಹೊಂದಿಕೊಂಡ್ ಭಷ್ಟಿ ತಾಗುವಂತೆ ಇದ್ದೊ. 'ಆರು ತಿಂಗ ಡ್ಯೂಟಿ ಮಾಡ್ರೆ ಸರ್ವೀಸ್ ಮುಗ್ದದೆ ಮಾವ. ಮತ್ತೆ ಇಲ್ಲೇ ಕೃಷಿ ಮಾಡಿಕಂಡ್ ಇದ್ದನೆ ಅಂತೇಳಿ ಹೆಣ್ಣ. ಕೂಸುನ ಕರ್ ಕರ್'ಕಂಡ್ ತಿಂಗಳ ಹಿಂದೆ ಬಂದು ಪಾಷಾಣ ಮೂರ್ತಿಗೆ ಬಡ್ಸಿ ಹೋದವಂಗೆ ಈಗ ಹಿಂಗೆ ಆತು. [illegible] ಮನೆಗೆ ಹೋಯಿತ ಮನೇಲಿದ್ದ ಜೀಪ್'ಲಿ ಭಾಗಮಂಡಲಕ್ಕೆ ಹೊರ್ಟ್ರೊ.

# ನಾನ್ ಮತ್ತೆ ನನ್ನ ಮಗುಳು



–ಕುದುಪಜೆ ಬೃಂದಾ ಕವನ್
ಕರಿಕೆ

ನನ ಮಗುಳ್‌ನ ಕಂಡ್ರೇ ನಂಗೆ ಜಾಸ್ತೀನೆ ಇಷ್ಟ।
ಆದರೆ ಅವ್ಳ ಗಲಾಟೆನ ತಡಿಯಕೆ ಹಂಞ ಕಷ್ಟ॥
ಹಂಗಿದ್ರೂಸ ಅಡ್ಡಿಯಿಲ್ಲೆ ಈ ಅಮ್ಮನ ಖುಸಿಗೆ।
ರೆಕ್ಕೆ ಕಟ್ಟಿ ಬಾನಿಗೆ ಹಾರ್‌ದಂಗೆ॥

ಬಹಳ ಕಮ್ಮಿ ತರದಲ್ಲಿತ್ತ್ ನನ್ನಲ್ಲಿ ತಾಳ್ಮೆ।
ಅದ್ನ ಜಾಸ್ತಿಮಾಡಿದ ಈ ಅಮ್ಮಗೆ ನೀನಂದ್ರೆ ಹೆಮ್ಮೆ॥
ಅಪ್ಪಗಂತು ನೀ ಇರೋಕು ಯಾಗೋಳು ಹೆಗಲ ಮೇಲೆ।
ಕಟ್ಟಿಕಾದೇನ ಅಪ್ಪ–ಮಗಳ ಈ ಬಂಧಕ್ಕೆ ಬೆಲೆ॥

ಬೆಳಗಾಕ್ಕನ ಹಲ್ಲುಜ್ಜುದರಿಂದ ಸುರಾಗೊ ನಿನ್ನ ರಗಳೆಯ ಸದ್ದೇ।
ಮಧ್ಯಾಹ್ನ, ಸಾಯಂಕಾಲ, ರಾತ್ರಿಯ ಮುಟ್ಟ ಇದ್ದದ್ದೇ॥
ಆದ್ರೂ ಅಡ್ಡಿಯಿಲ್ಲೆ ಈ ಅಮ್ಮನ ಖುಸಿಗೆ।
ರೆಕ್ಕೆ ಕಟ್ಟಿ ಬಾನಿಗೆ ಹಾರ್‌ದಂಗೆ॥

ಕ್ವಾಂಬರೇಲಿ ಮಡಗಿದ ವಸ್ತು ಯಾವುದು ಮಡ್‌ಗಿದಲ್ಲಿ ಇರ್ದುಲೆ।
ಆದರೆ ಎಲ್ಲವಕ್ಕು ಗೊತ್ತುಟ್ಟು ಕಾಣೆ ಆದು ನಿನ್ನಿಂದಲೇ॥
ಆದ್ರೂ ಅಡ್ಡಿಯಿಲ್ಲೆ ಮಗಳೆ ಈ ಖುಸಿಗೆ।
ರೆಕ್ಕೆ ಕಟ್ಟಿ ಬಾನಿಗೆ ಹಾರ್‌ದಂಗೆ॥

ನನ ಮಗುಳ ಬಾಯ್‌ಲಿ ಕೇಳೋಕು ಅರೆಬಾಸೆಯ ಗತ್ತ್।
ತೊದಲುತ್ತಾ ಪದಗಳನ್ನು ಸೇರಿಸಿ ಮಾತಾಡೊ ಗಮ್ಮತ್ತ್॥
ಅದಕ್ಕೆ ಮಗಳು ಅಡ್ಡಿಯಿಲ್ಲೆ ಈ ಅಮ್ಮನ ಖುಸಿಗೆ।
ರೆಕ್ಕೆ ಕಟ್ಟಿ ಬಾನಿಗೆ ಹಾರ್‌ದಂಗೆ॥

ಅಮ್ಮನತ್ರ ಪೆಟ್ಟ್ ಬೈಗಳ ಎಲ್ಲವೂ ತಿಂದೀಯಾ।
ಪುನಃ ಅಮ್ಮನೇ ಬೇಕುತಾ ಓಡಿ ಬಂದಿಯಾ॥
ಇದೇ ಅಲ್ಲನಾ ಅಮ್ಮ–ಮಗಳ ಸಂಬಂಧ।
ಲೋಕಲಿ ಬೆಲೆನೇ ಕಟ್ಟಕೆ ಆಗದ ಅನುಬಂಧ॥

# ಅರ್ಪಣೆ

–ಪ್ರೊ. ದಂಬೆಕೋಡಿ ಸುಶೀಲಾ ಸುಬ್ರಮಣಿ
[illegible]

ಹಚ್ಚ ಹಸ್‌ರ್ ಬಯ್ಕೆ ಮೆರ್ದ್
ಮಾತೃ ಭೂಮಿಗಾಗಿ ಜೀವ ತೊರ್ದ್
ಪ್ರೀತಿನೆಲ್ಲಾ ಬುಟ್ಟ್
ಹೆಣ್ಣ್ ಮಕ್ಕಳ್ನ ಬುಟ್ಟ್

ತಾಯ್ ಕರೆಗೆ ಓಗೊಟ್ಟ್
ಜೀವ ಕಳ್ದ್ ಒಲವ ಮೆರ್ದ್
ನಾಡ್ನ ನಾಲ್ದೆಸೆಗ್ ಕಣ್ಣ್ ತೋರ್ಸಿ
ಕಣಕಣಲಿ ಬಿಸಿರಕ್ತ ತುಂಬ್ಸಿ

ಆಸೆ ತೇಳುವ ಕೊನರ ತೊರ್ದ್
ರಕ್ಕಸರ ಎದ್‌ರ್ ಮೆರ್ದ್
ಪ್ರಾಣಕೊಟ್ಟ ಜಗದ ವೀರರೇ
ತಾಯ್ ಕರೆಗೆ ಜೀವಕೊಟ್ಟ ಯೋಧರೇ

ನಿಮ್ಗಿದ್ ನಿಮ್ಗಿದ್ ನುಡಿನಮನ
ಅಮರ ಆತ್ಮ ಅಮರ ಜೀವನ
ಅವ್ವಕಣ್ಣ್ ಬುಡಲಿ ಜೀವಜಲ ತುಂಬಿ ಹರೀಲಿ
ಜನರೆಲ್ಲಾ ನೆಮ್ಮದೀಲಿ ಬಾಳಲಿ.

ವರ್ಷ ಒಂದ್ ಕಳ್ದ್
ಹರ್ಷ ಹೊರ್ಟ್ ಹೋತಾ
ಕರುಣೆಯಿಂದ ಸಾಕ್‌ದ್‌ಪ್ಪವ್ವ ದೂರ ಹೋದೊ
ಮರುಕ ಬಾತ್ಲೆನಾ ಮಂಜಂಗೆ

ಬ್ಯಾರೆ ಮನೆಯ ಮಾಡಿ
ವರ ಕುಮಾರ್ನ ಸಾಕ್ತಾ
ಕೈಹಿಡ್ದ್ ನಡ್ಸ್‌ತಾ
ಸೈತೇಳಿಕಂಡ್ ಸಾಕಿಕೆ ಮನ್ಸ್ ಬಾತಾ ಕಂದಾ?

ನಡೆಯಕ್ಕಾಗ್ದ [illegible]
[illegible]
[illegible]
ಬಡವಾಗಿ ಹೊಯ್ತ್‌ಯ್ಯೋ ಬಾಳದೋಣಿ



# ಅರೆಬಾಸೆ ಹಳಬರ ಆಡ್ ಮಾತ್‌ಗ

– ಎಂ. ಜಿ. ಕಾವೇರಮ್ಮ
"ನಿಸರ್ಗ" ಮಾವಜಿ, ಸುಳ್ಯ, ದ. ಕ.

ನಾವು ಮಾತಾಡ್ವ ಅರೆಬಾಸೆಂತೇಳ್ತೆ ಬಾಳ ಪೊರ್ಲುನ ಬಾಸೆ. ಅದರ್ಲಿ ಸಬ್ದಗಳ ಕೊಪ್ಪರಿಗೆನೇ ಉಟ್ಟು. ಒಕ್ಕಿಕಂಡ್ ಪೋದ ಹಾಂಗೆ ಪೊರ್ಲು ಪೊರ್ಲುನ ಆಡ್ ಮಾತ್‌ಗ ಸಿಕ್ಕಿವೆ. ಹಳಬರ್ ಮಾತಾಡ್ವ ಅರೆಬಾಸೆನ ಪೊರ್ಲುನೇ ಬೇರೆ. ಅವು ಮಾತ್ ಮತ್ತೆ ಗಾದೆಗಳ ಆಡ್ ಮಾತ್‌ನ ಸೇರ್ಸಿ ಮಾತಾಡಿ ಅರೆಬಾಸೆನ ಪೊರ್ಲುನ ಹೆಚ್ಚಿಸ್ತಿದ್ದೊ. ಈಗನ ಮಕ್ಕಳ್ಗೆ ಅದರ ಗಂಧ-ಗಾಳಿನೂ ಗೊತ್ತಿಲ್ಲೆ. ನಾ ನನ್ನ ಹಿರಿಯರ್ ಮಾತಾಡ್ತಿದ್ದ ಅರೆಬಾಸೆನ ಆಡ್ ಮಾತ್ಗಳ ನೆಂಪು ಮಾಡಿ, ನಂಗೆ ಗೊತ್ತಿದ್ದಸ್ಟ್ ನೀವ್ಗೆ ತಿಳ್ಸಿನೆ.

1. ನಿನ್ನ ಗುಂಡಿ ಕಡ್ಡ್ ಇಸಿಕೆ. ತಿಂಬಕಾಕನ ಬಾ. ನಿನ್ನ ಸೊಂಟನ ನಿಗರ್ಸಿನೆ.
   ಈ ಮಾತ್‌ನ ಅಯ್ಯ್ಕ ಮಕ್ಕಳ ಹಕ್ಕಲೆ ಏನಾರ್ ಕೆಲ್ಸ ಹೇಳ್ರೆ, ಮಕ್ಕ ಆ ಕೆಲ್ಸನ ಮಾಡದೆ ಆಡಿಕೆ ಪೋದರೆ, ಅಯ್ಯ್ಕೆ ಹೀಂಗೆ ಬೊಯ್ಯುವೆ. ಆ ಆಡ್ ಮಾತ್‌ನ ಸೊಗ್ಸ್‌ನ ನೀವೇ ತಿಳ್ಕಣಿ. ಮಕ್ಕಳ ಸೊಂಟನ ನಿಗರ್ಸಿರೆ ಅವರ ಅಯ್ಯ್ಕಳೇ ನೋಡಕಲೆ. ಇದ್ ಅಯ್ಯ್ಕೆ ಬೊಯ್ಯುವ ಒಂದ್ ಆಡ್ ಮಾತ್ ಅಸ್ಟೆ.
2. ನಿನ್ನ ಕೊಂತ್ರಾಸ್ ಬುದ್ದಿನ ತೋರ್ಸ್ ಬಡ.
   ಒಬ್ಬ ಇನ್ನೊಬ್ಬನ ಕಂತ್ರಿ ಬುದ್ಧಿ ಗೊತ್ತಿರಿಕನ ಅಂವ ಏನಾರ್ ಇಂವನ ಮೋಸ ಮಾಡಿಕೆ ನೋಡಿರೆ ಈ ಮಾತ್‌ನ ಹೇಳಿವೆ.
3. ಅಂವ ಈಗ ಒಟ್ಟೆ ಕೊರುಂಗುನಾಂಗೆ ಆವುಟು.
   ಬಾಳ ಬೊಚ್ಚಿಕಂಡ್ ಇದ್ದಂವನ ನೋಡಿ ಜನ ಹೇಳ್‌ವ ಆಡ್‌ಮಾತ್ ಇದ್.
4. ಅಂವ ತೆಳಿಲಿ ಬಿದ್ದ ಎಲಿನಾಂಗೆ ಕಂಡದೆ.
   ಒಬ್ಬ ಮೋನ್‌ಸಂದ ಏನ್ ಸಾ ಮಾಡಿಕೆ ಆಗದ ಸ್ಥಿತಿ ಇರಿಕನ ಅಂವನ ನೋಡಿ ಜನಂಗ ಹೇಳುವ ಮಾತ್ ಇದ್.
5. ಅಂವ ಬರೇ ಬಬ್ಬುಸ
   ದಪ್ಪ ಇದ್ದ ಮೋನ್‌ಸಂದ ಏನ್ ಕೆಲ್ಸ ಮಾಡಿಕೆ ಆಗದಿರಿಕನ ಅಂವನ ನೋಡಿ ಜನ ಹೇಳುವ ಮಾತ್ ಇದ್.
6. ಆ ಕುಳ್ಳಂಗೆ ಯಾರ್ ಹೆಣ್ಣ್ ಕೊಟ್ಟವೆ?
   ಬಾಳ ಗಿಡ್ಡ ಇದ್ದ ಹೈದನ ನೋಡಿ ಜನ ಹೇಳುವ ಮಾತ್ ಇದ್.
7. ಅಂವ ದೊಡ್ಡ ಗಳೆನಾಂಗೆ ಬೆಳ್ದುಟು.
   ತುಂಬಾ ಎತ್ತರ ಇದ್ದ್ ಸಪೂರ ಇದ್ದಂವಂಗೆ ಜನ ಹೇಳುವ ಮಾತ್ ಇದ್.
8. ಹೂಂಸಿನ ಹೆಣ್ಮಕ್ಕ ಎದ್ದ್ ಹೋದ ಹಾಂಗೆ ಹೋತ್
   ಏನಾರ್ ಅನ್ನಂವನ ಮಾತ್‌ಗೆ ಉತ್ತರ ಕೊಡಿಕೆ ಆಗದೆ ಅಲ್ಲಿಂದ ಎದ್ದ್ ಹೋದಂವನ ನೋಡಿ ಜನ ಹೇಳುವ ಮಾತ್ ಇದ್.
9. ಇಂಗ್ ತಿಂದ ಮಂಗನ ಹಾಂಗೆ ಆವುಟು.
   ಎರಿಕಾಕನ ಮರ್ಯಾದ್ ಆಸೆಗಿಗೆ ಜೀವನಲಿ ಸೋಲಿಕಾಕನ ಜನ ಹಂಗುಸುವ ಮಾತ್ ಇದ್.

10. ಅಂವ ಕಟ್ಟಿ ಹಾಕಿದ ಕೋಣನ ಹಾಂಗೆ ಬೆಳ್ದುಟು.
ಗಟ್ಟಿ ಮುಟ್ಟು ಆಗಿ ಮೈಕೈ ತುಂಬಿಕಂಡ್ ಬೆಳ್ದ್, ಯಾರನೂ ಕ್ಯಾರೇ ಇಲ್ಲದೆ ಮೆರೆವಂವನ ನೋಡಿ ಜನ ಹೇಳುವ ಮಾತ್ ಇದ್.

11. ಆ ಹೈದ ಉರ್ತದ ಕೊಳ್ಳಿ.
ಕುದ್ದಲ್ಲಿ ಕುದ್ರದೆ. ನಿತ್ತಲ್ಲಿ ನಿಲ್ಲದೆ ಉರಿ ಬಾವ ಮಕ್ಕಳ ನೋಡಿ ಜನ ಹೇಳುವ ಮಾತ್ ಇದ್.

12. ಅದರ ನಾಲಗೆ ಸಮಗಾರನ ರೆಂಪಿಗೆ ಹಾಂಗೆ ಉಟ್ಟು.
ಇನ್ನೊಬ್ಬರ ಮಾತಾಡಿಕೆ ಎಡೆಕೊಡದೆ, ತಾನೇ ಮಾತ್‌ಲಿ ಜಿರ್ಸತೀಂತ ತೋರ್ಸಿಕೊಂಬ ಹೆಣ್ಮಕ್ಕಳ ನೋಡಿ ಜನ ಹೇಳುವ ಮಾತ್ ಇದ್. ಸಮಗಾರ ರೆಂಪಿಗೆಲಿ ಒಂದೇ ಸಮ ಜೊಡ್ಡ್ ಕಂಡೇ ಇದ್ದರೆ.

13. ಅದರ ಬಣ್ಣ ಹಂಣ್ ಸೋಂತೆನಾಂಗೆ ಉಟ್ಟು.
ಕೆಂಪು ಕೆಂಪಾಗಿ ಇರುವ ಗೂಡೆಗಳಿಗೆ ಈ  ಉದಾರ್ಣೆನ ಹಿಂದೆನ ಕಾಲದೊವು ಕೊಡ್ತಿದ್ದೊ.

14. ಹೊತ್ತೇಲ್ ಮೋರೆಯಂವ
ಕರ್ವಾಂಗ ತುಂಬಿ ಮೋರೆ ಎಲ್ಲಾ ಕಪ್ಪಾಗಿದ್ದಂವಂಗೆ ಹೇಳ್ತಿದ್ದ ಮಾತಿದ್.

15. ಅಂವ ಕರಿ ಹೆಗ್ಗಣನಾಂಗೆ ಉಟ್ಟು.
ಕಪ್ಪು ಬಣ್ಣದೋವ್ಕೆ ಮಕಾರ್ ಮಾಡಿಕಂಡ್ ಹೇಳುವ ಮಾತ್ ಇದ್.

16. ಎಂಣೆ ಇಲ್ಲದೆ ನಿನ್ನ ತಲೆ ಕೂದೋಲು ಒಣ್‌ಂಗಿದ ಚಪ್ಪರದಾಂಗೆ ಆವುಟು.
ಎಂಣೆ ಹಾಕದೆ, ತಲೆ ಬಾಚದೆ ತಲೆ ಕೂದೋಲು ಕೆದ್ರಿಕಂಡ್ ಇದ್ದೋವ್ಕೆ ಹೇಳುವ ಮಾತ್ ಇದ್.

17. ಆ ಗೂಡೆ ಬರೇ ಹಾಲೆಸಂಡ್.
ಸುಕಲಿ ಬೆಳ್ದ ಗೂಡೆಗಳ ನೋಡಿ ಹೇಳುವ ಮಾತ್ ಇದ್. ಅವು ಏನ್ ಸಾ ಕೆಲ್ಸ ಮಾಡಿಕಿಲ್ಲೇಂತ ಇದರ ಅರ್ತ.

18. ಒಣ್‌ಂಗಿದ ಉಪ್ಪಣದಾಂಗೆ ಚುರುಂಟಿ ಕಟ್ಟಿ ಹೋವುಟು.
ಹೊಟ್ಟೆಗೆ ಸರ್ಯಾಗಿ ತಿನ್ನದೆ ಕೆಲ್ಸ ಮಾಡಿ, ಮಾಡಿ ಒಣ್‌ಂಗಿ ಹೋದವರ ನೋಡಿ ಹೇಳುವ ಮಾತ್ ಇದ್.

19. ನನ್ನ ಮಾತ್ ಅಂವಂಗೆ ಎಕ್ಕಿಡೆಗೆ ಮೊದ್ದ್ ಕೊಟ್ಟ ಹಾಂಗೆ ಆತ್.
ಮಾತ್‌ಲಿ ಎಲ್ಲವರ ಗೆದ್ದಂವನ, ಒಬ್ಬ ಮಾತ್‌ಲಿ ಸೋಲ್ಸಿರೆ, ಸೋಲ್ಸಿದಂವ ಹೇಳುವ ಮಾತ್ ಇದ್.

20. ಅಂವನ ಕೈಲಿ ಬೇಸಿದ ಗೆಳ್ಸ್ ಚೊಲ್ಲಿಕೆ ಆಕಿಲ್ಲೆ.
ಬೇಸಿದ ಗೆಳ್ಸ್‌ನ ಚೊಲ್ಲುದು ಬಾಳ ಸುಲಬ, ಸಣ್ಣ ಸಣ್ಣ ಕೆಲ್ಸನೂ ಮಾಡಿಕೆ ಆಗದಿರುವವನ ನೋಡಿ ಹೇಳುವ ಮಾತ್ ಇದ್.

21. ನಿನ್ನ ಪೊಳೆಜಿನ ಜಾರ್ಸಿನೆ.
ಇದೊಂದ್ ಬೊಯ್ಯುಕನ ಹೇಳುವ ಮಾತ್. ಪೊಳೆಜೀಂತೇಳಿರೆ ಚೋಲಿ.

22. ಕೊತ್ತಿ ಕೊಂದವನಾಂಗೆ ದೊರ್ಪುಬಡ.
ಕೊತ್ತಿನ ಕೊಂದೋವು ದೊರ್ಪುವೆಗಡ. ದೊರ್ಪಿಕಂಡ್ ಮಾತಾಡೋವ್ಕೆ ಈ ಮಾತ್‌ನ ಹೇಳಿವೆ.

23. ಆಂಜಿದ್ ಮಾಯಾತ್.
ಕಣ್ಣ್‌ಗೆ ಕಂಡ ಹಾಂಗೆ ಆಗಿ ಮಾಯ ಆಕನ ಹೇಳುವ ಮಾತ್ ಇದ್.

24. ಅರ್ಕಿರೆಲಿ ಕೆದ್ಲ್ ಅಡ್ಕ ಆದ ಹಾಂಗೆ ಆವುಟು.
ಅರ್ಕಿಲ್‌ಲಿ ಕೆದ್ಲ್ ಅಡ್ಕ ಒಣ್‌ಂಗಿದಾಂಗೆ ಇದ್ದದೆ. ತಲೆಗೆ ಎಂಣೆ ಹಾಕದೋವ್ಕೆ ಹೇಳುವ ಮಾತ್ ಇದ್.

25. ಅಂವಂದ ಏನ್ ಸಾ ಹರ್ಯಕಿಲ್ಲೆ

26. ಅಂವ ಗೂಂಜಿಂದ ಬುಡಿಕಿಲ್ಲೆ, ಅದ್ ರೆಚ್ಚೆಂದ ಬುಡಿಕಿಲ್ಲೆ.
ಗಂಡ-ಹೆಣ್ಣ್ ಜಗಳ ಆಡಿಕಾಕನ ನಾ ಮೇಲೆ, ನಾ ಮೇಲೇಂತ ಒಬ್ಬರ್ಂದ ಒಬ್ಬ ಬಿರ್ಸತ್ತಿಗೆ ಮೆರ್ಸಿಕಾಕನ ಹೇಳುವ ಮಾತ್ ಇದ್.

27. ಅಂವಂಗೆ ಪಿಸ್ರ ಬಂದರೆ ಮೊನ್ಸ ಆಲ್ಲ.
ಯಾಗೋಳೂ ಸಮುದಾನಲಿ ಇರುವ ಮೊನ್ಸ ಸಿಟ್ಟ್ ಬಾಕನ ರಕ್ಕಸನಾಂಗೆ ಆಡೋವ್ಕೆ ಹೇಳುವ ಮಾತ್ ಇದ್.

28. ಅದರ ಪಿತ್ತ ನೆತ್ತಿಗೇರಿಟು
ಜಾಯಿ ಬಂದ ಹಾಗೆ ಮಾತಾಡೋವ್ಕೆ ಹೇಳುವ ಮಾತ್ ಇದ್. ಪಿತ್ತ ನೆತ್ತಿಗೇರಿರೆ ಹುಚ್ಚರಾಂಗೆ ಮಾತಾಡ್ವೆ ಗಡ.

29. ನನ್ನ ಪಿತ್ತನ ಕೆರ್ಳ್‌ಸ್ ಬಡ.
ಮಕ್ಕ ತುಂಬಾ ಹಟ ಮಾಡಿಕನ ಆಯ್ಯಿಕ ಈ ಮಾತ್‌ನ ಹೇಳಿವೆ.

30. ನಾಳಿ ಚಿರಿಂಬಿನೆ.
ಕೂಸು ಒಂದೇ ಸಮ ಮೊರ್ಡಿಕನ ಕೆಲ್ಸಲಿದ್ದ ಅಯ್ಯಿಕ ಕೂಸುನ ಮೇಲೆನ ಸಿಟ್ಟ್ಂದ ಈ ಮಾತ್‌ನ ಹೇಳಿವೆ.

31. ಅಂಡೆಲಿಲ್ಲೆ, ಆಲಗೆಲ್ಲಿಲೆ.
ಅತ್ತ ಅಂವನ ಕಡೆನೂ ಸಿಲ್ಲದೆ, ಇತ್ತ ಇಂವನ ಕಡೆನೂ ಸಿಲ್ಲದೆ ಇರೋವ್ಕೆ ಹೇಳುವ ಮಾತ್ ಇದ್.

32. ಮೊರಿ ಹಾಕಿದ ಬೊಗ್ಗಿ ನಾಯಿನಾಂಗೆ ಆವುಟು.
ಮೊರಿ ಹಾಕಿದ ಜೊಗ್ಗಿ ನಾಯಿ ಬಾಳ ಜೊಚ್ಚಿಕಂಡ್ ಇದ್ದದೆ. ಜೊಚ್ಚಿಕಂಡ್ ಇದ್ದ ಹೆಣ್ಮಕ್ಕಳ ನೋಡಿ ಹೇಳುವ ಮಾತ್ ಇದ್.

33. ಅಣ್ಣಾ, ಅಣ್ಣಾಂತ ತಲೆ ಮೇಲೆ ಹೊರು. ಕಡೆಗೆ ನಿಂಗೆ ಸಿಕ್ಕುದು ಅಂಬಟೆ ಗೊರುಂಟು
ತವರು ಮನೆಯವರ ತಲೆ ಮೇಲೆ ಹೊರುವ ಹೆಣ್ಣ್‌ಗೆ ಅದರ ಅತ್ತೆ ಹೇಳುವ ಮಾತ್ ಇದ್.

34. ನಿನ್ನ ಪುಕ್ಳಿಗೆರ್ಡ್ ಬುಟ್ಟರೆ ಉಟ್ಟಲೆ, ಕಣ್ಣ್‌ಲಿ ಕಿಚ್ಚಿ ರೆಟ್ಟೊಕು
ಮಕ್ಕ ಹಟ ಮಾಡಿ ಅಪ್ಪೆ ಕೊಟ್ಟ್‌ಕಂಟ್ ಮೊರ್ಡಾಕನ ಅಪ್ಪಂದರ್ ಹೇಳುವ ಮಾತ್ ಇದ್.

35. ನಾ ಎಸ್ಟ್ ಹಂದಾಡ್ಸಿ ಕೇಳ್ರೂ ಅಂವ ಗುರು ಗುಮ್ಂತ ಕುದ್ದುಟು.
ಮಂಜ ಮಾತಾಡದೇ ಕುದ್ರಿಕನ ಅಯ್ಯಿಕ ಅಪ್ಪನೊಟ್ಟಿಗೆ ದೂರು ಕೊಡಿಕನ ಹೇಳುವ ಮಾತ್ ಇದ್.

36. ಹೊಟ್ಟೆಲಿ ಕಕ್ಕೆ ಮೊರ್ಟದೆ
ತುಂಬಾ ಹೊಟ್ಟೆ ಇಸಿಕನ ಹೇಳುವ ಮಾತ್ ಇದ್.

37. ಅಂವ ನಾಯಿನಾಂಗೆ ನೋಕುಲು ಹಾಕಂಡ್ ಇತ್ತ್
ಯಾಗ ತಿಂಬಕೆ ಸಿಕ್ಕಿದೇಂತ ಆಸೆಂದ ಇರಿಕನ ಈ ಆಡ್ ಮಾತ್ ಹೇಳಿವೆ.

ನಂಗೆ ನೆಂಪು ಇದ್ದದರ ಬುಟ್ಟು ಸೇರ್ಸಿ ಇಲ್ಲಿ ಕೊಟ್ಟುಳೆ. ಓದಿ ನೀವ್ಗೆಲ್ಲಾ ಕುಸಿ ಆದರೆ ಅದೇ ನಂಗೊಂದ್ ಬಿರ್ದ್.

❑

## ಅತ್ತಿಗೆನ ತಂಗಿ

-ಕೂಡಕಂಡಿ ಚೇತನ್ ಗೋಪಾಲ್

ಅಣ್ಣನ ಮೊದುವೆ ದಿನ
ನಂಗಂತೂ ಬಾರೀ ಖುಷಿ
ಯಾಕೆತ ಹೇಳ್ರೆ ಮೊದುವೆಗೆ ಬಂದದೆ
ಅತ್ತಿಗೆನ ತಂಗಿ ರಿಷಿ

ಅವಳ್ನ ಗ್ಯಾನ ಮಾಡ್ತಾ ಇದ್ದಾಂಗೆ
ಬಂದೆ ಬುಟ್ಟತ್ ದಿಬ್ಬಣದ ಗಾಡಿ
ನಾ ನಿಂತಾಂಗೆ ನಿತ್ತೇ ಬುಟ್ಟೆ ಆ ಗೂಡೆನ ನೋಡಿ
ವೀಳ್ಯಕ್ಕೆ ಹೋಕನ ಅದ್ ಇತ್ತ್ ಗಾಳಿಗೆ
ಹಾರಿ ಹೋಗುವಾಂಗೆ
ಈಗ ಆಗುಟು ಗಾಳಿನ ತಡ್ದ್ ನಿಲ್ಸುವಾಂಗೆ
ಮದುವೆಲಿ ನೋಡ್ತಾ ಇತ್ ಅದ್ ನನ್ನ ಆಗಾಗ
ನಂಗೆ ಸುರು ಆರತ್ ಎದೆಲಿ ಪ್ರೀತಿನ ರಾಗ

ಸಾಲ್‌ಲಿ ಕುದ್ದ್ ಮಾಡ್ತಾ ಇದ್ದರೂ ಊಟ
ಬುಡ್ತಾ ಇತ್ಲೆ ಅವ್ಳ ಓರೆ ಕಣ್ಣ್‌ನ ನೋಟ
ತಡ್ಕಣಿಕೆ ಆತ್ಲೆ ಕೇಳಿಯೇ ಬುಟ್ಟೆ
ನಾ ನಿಂಗೆ ಇಷ್ಟನಾ ತ
ಅವ್ಳ ಹೇಳ್ತ್ ನಂಗೆ ಬೇರೆ ಹೈದ ಉಟ್ಟುತ
ಆದರೂ ನಂಗೆ ಗೊತ್ತಾತ್ಲೆ ಯಾಕೆ ನನ್ನ
ನೋಡ್ತಾ ಇತ್ತ್‌ತ
ಅತ್ತಿಗೆನ ತಂಗಿ
ಆಮೇಲೆ ಅವ್ಳ ಹೇಳ್ತ್ ನಾ ನೋಡ್ದ್ ನಿನ್ನ ಅಲ್ಲ
ನೀ ಹಾಕಿದ ಪಟಯದ ಅಂಗಿ....

❑



## ಕೊಡುಗನ ಗೌಡರ ನೋಡು



-ಪೇರಿಯನ ಹರ್ಷಿತಾ ಕೇತು
ಮರಗೋಡು, ಮಡಿಕೇರಿ

ಕೊಡುಗನ ಗೌಡರ ನೋಡು
ಅವ್ರಲ್ಲಿರುವ ಗತ್ತುಗಮ್ಮತು ನೋಡು
ಆಚಾರ-ವಿಚಾರ ನೋಡು
ಪದ್ಧತಿ-ಪರಂಪರೆ ನೋಡು
ಗೌಡರ ಸಂಸ್ಕೃತಿಯ ಬೀಡು
ಅದುವೇ ಕೊಡಗು ನಾಡು.

ಗೌಡರ ಕುಪ್ಪಸದಟ್ಟಿ ನೋಡು
ಕೋವಿ ಹಿಡ್ದ ಗತ್ತು ನೋಡು
ಗೌಡ್ತಿಯರ ಗೇಂಟಿ ಸೀರೆನೋಡು
ತೊಟ್ಟ ನೆರಿಗೆ ನೋಡು.

ಹುತ್ತರಿ ಕೋಲಾಟ ನೋಡು
ಹಬ್ಬಲಿ ಕುಣಿಯದು ನೋಡು
ಗೌಡರ ಮನೆಗಳ ನೋಡು
ಕೂಡು ಕುಟುಂಬನ ನೋಡು

ಎತ್ತು ಕಟ್ಟಿ ಹೂಡುದು ನೋಡು
ಅಗೆ ತೆಗ್ದು ನಾಟಿ ಮಾಡುದು ನೋಡು
ಕೊಡಿ ನಾಟಿ ಇಟ್ಟದು ನೋಡು
ನಾಟಿ ಗದ್ದೆಲಿ ಓಟ ನೋಡು

ತೋಟಲಿ ದುಡಿಯದು ನೋಡು
ಮಳೆಲಿ ನೆನೆಯದು ನೋಡು
ಬಿಸಿಲುಲಿ ಬಾಡದು ನೋಡು
ಕೂಡಿ ಬಾಳುದು ನೋಡು

ಹಸಿರು ಪ್ರಕೃತಿ ನೋಡು
ಹರಿವ ಜಲಧಾರೆ ನೋಡು
ವೀರಯೋಧರ ತವರು ನೋಡು
ಇದುವೇ ನಮ್ಮ ಗೌಡರ ನಾಡು....

ಅಂತಳೊ. ಕಾಲಾಡ್ ಕಪ್ಪೆ ಕಾಲಾಡ್ ಅಂತನೂ ಆಡ್ಸಿಕಂಡಿರ್ದುರ್ ಕಂಡರೆ ಮುಮುಗುಟ್ಟಿಕಂಡ್ ಬಂದ್, ಕೂಸುನ ಎಳ್ಕಂಡ್ ಹೋತಿತ್ತ್ . ಇದೆಲ್ಲಾ ಎಂತಾ ಹಳೇ ಆಟ ಎಂತಾ ಅಜ್ಜಿಕತೆ ರೈಮ್ಸ್ ಎಲ್ಲಾ ಕಲ್ತದು ಬುಟ್ಟ್ ಟ್ವಿಂಕಲ್ ಟ್ವಿಂಕಲ್ ಲಾಲಿ ಹಾಡುವೆಂತ ಪರ್ಚೆಂತಿತ್ತ್.

ಒಂದು ದಿನ ಟಿಕ್ಳಿನ ತೊಡೆಮೇಲೆ ಕೂರ್ಸಿಕಂಡ್ ಬರುವ ವಾರ ಅಮೇರಿಕಾದ ನಿನ್ನ ಚಿಕ್ಕ ಚಿಕ್ಕಿ ಅಣ್ಣಕೂಸು ಎಲ್ಲಾ ಬಂದವೆಂತಾ ಜಾಮಪ್ಪ ಹೇಳ್ಕನ ಟಿಕ್ಳಿ "ಯಾವ ಚಿಕ್ಕ ಚಿಕ್ಕಿ ಅಣ್ಣ ಯಾರ್"ಅಂತ ಕೇಳ್ತ್ "ನೋಡು ಬಾಡೆಲಿ ನಮ್ಮ ಪಟದ ಪಕ್ಕಲೆ ಒಂದು ಪಟ ಉಟ್ಟಲ್ಲಾ ಅದರ್ಲಿ ಇರೊವೇ ನಿನ್ನ ಚಿಕ್ಕಪ್ಪ ಚಿಕ್ಕಮ್ಮ . ಅವರ ಮಂಚನೇ ನಿನ್ನ ಅಣ್ಣ" ಅಂತ ಟಿಕ್ಳಿಗೆ ಗೊತ್ತಾಗುವಾಂಗೆ ಹೇಳ್ಕನ ಎಲ್ಲಿತ್ತೋ ಸೊಸೆ ಶೈಲ ಮುಸುಮುಸು ಮಾಡಿಕಂಡ್ ಬಂದ್ ಜಾಮಪ್ಪನ ತೊಡೆಮೇಲಿದ್ದ ಕೂಸುನ ಎಳ್ಕಂಡ್ ಹೋಗಿ ಕೋಂಬರೆನ ಬಾಗ್ಲನ ಡಬ್ಬಾಂತ ಹಾಕಂಡತ್. ಜಾಮಪ್ಪಂಗೆ ಎದಗೇ ಹೊಡ್ದಾಂಗೆ ಆತ್. ಈ ಅಮೆರಿಕದ ರಾಜಕುಮಾರ ರಾಣಿ ಊರಿಗೆ ಬಾರದೇ ವರ್ಸ ಐದಾರ್ ಆತ್. ಅವ್ರುಕ್ಕೆ ಏನ್ ಆ ರಾಣಿ ಮೋಡರ್ನ್ ಆಗಿ ಮೋರೆಗೆ ಬಣ್ಣ ಹಾಕಂಡ್ ತುಟಿಗೆ ಲಿಪ್ ಸ್ಟಿಕ್ ಮೆತ್ತಿಕಂಡ್ ಪಾರ್ಲರಿಗೆ ಹೋಗಿ ಹುಬ್ಬುನ ಕತ್ತರಿಸಿಕಂಡ್ ಕೂದಲ್ನ ಬಾಬ್‌ಕಟ್ಟ್ ಮಾಡ್ಸಿಕಂಡ್ ಕಾರ್ಲಿ ಬೇಕಾದಾಂಗೆ ತಿರ್ಗಿಕಂಡ್ ಇರ್ದು. ಇಬ್ಬೊರೂ ಇಂಜಿನಿಯರ್ಗ ದುಡ್ಡಿಗೇನೂ ಬಂಗ ಇಲ್ಲೆ ಬೇಕಾದಾಂಗ ಮಜಾ ಮಾಡಿಕಂಡ್ ಇರಕ್. ನಂದಂಗೋ ತಮ್ಮಂತ ಹೇಳ್ತೆ ಏನೋ ಪ್ರೀತಿ ತಮ್ಮನ ನಾದ್ನಿನ ಹೊಗುಳುದೇನ್. ಇನ್ನು ಅವ್ವ ಅಪ್ಪನ ಕೇಳೊಕೋ " ಹೆತ್ತವ್ಕೆ ಹೆಗ್ಗಣ ಮುದ್ದು"ಅಂತ ಗಾದೆನೇ ಉಟ್ಟಲೇ. ಸಣ್ಣ ಮಂಚನ ಹೊಗ್ಳುದರ್ಲಿ ಬೊತ್ತೇ ಬೊತ್ತು ಆಂವ ಕಲಿಯಕೆ ಬಾರೀ ಉಸಾರ್. ಇಂಜಿಯರಿಂಗ್ಲಿ ರೇಂಕ್ ಪಡ್ಕಂಡಿತ್ತ್ ಹಾಂಗೆ ಹೀಂಗೆಂತ ದೇವ್ರ ದಯೆಂದ ಆವಂಗೆ ಸರಿಯಾದ ಗೂಡನೇ ಸಿಕ್ಕುಟು ಎಂತಾ ಮನಾರ ಅವಳ ಕೆಲ್ಸ ಬೊಗ್ಗೆ ಏನ್ ಅಚ್ಚ್ ಕಟ್ಟ್‌ಂತ ಇಬ್ಬೊರು ಅಜ್ಜ ಅಜ್ಜಿ ಕುದ್ಕ್ ಕಂಡ್ ಹೊಗ್ಳುದರ್ಲಿ ಕಮಿ ಬುಡಿಕೇ ಬೊತ್ತು . ಇನ್ನು ಅವ್ರು ಇಲ್ಲಿಗೆ ಬಂದರೆ ತಡ್ಕಣಿಕೇ ಬೊತ್ತು . ಮೈದ್ನ ಅವನ ಹೆಣ್ಣ್ ಇಲ್ಲಿಗೆ ಬಂದರೆ ಹೇಂಗಿರ್ದು ಈಗಳೇ ನಾಂತ ಹೇಳ್ತೆ ಸಸಾರ ಆ ಬಿನ್ನಾಣಗಿತ್ತಿ ಬಂದರೆ ನಾ ಅಂತೂ ಕಾಲ್ ಕಸಂತ ತನ್ನ ಬಗ್ಗನೇ ಎಲ್ಲಿಲ್ಲದ ಬೇಜಾರ್. ಕೀಳರಿಮೆ ಆಕೆ ಸುರುವಾತ್ . ಮನ್ಸನ ಕಿರಿ ಕಿರಿ ಬಾಯಿನ ಪಿರಿಪಿರಿ ಸಿಟ್ಟ್ ಸಿಡ್ಕ ಹೆಚ್ಚಾತ್ ಬಾಡೆಲಿ ಜಾಂಪ ತೊಡೆಮೇಲೆ ಕುದ್ರಿಸಿಕಂಡ್ ಟಿಕ್ಳಿಗೆ ಶ್ಲೋಕ ಹೇಳ ಕೊಡ್ತರ ಕಂಡ್ ಪಿತ್ತ ನೆತ್ತಿಗೇರಿ " ಈ ಹಾಳ್ ಶ್ಲೋಕಗೀಕ ಕಲ್ತ್ ನೀ ಹಳ್ಳಿಲಿ ಗುಗ್ಗು ಆದಿಯಾ ಹೇಂಗೆ? ನಾ ಅಂತೂ ನಿನ್ನ ಈ ಊರ್ನ ಕನ್ನಡ ಸಾಲೆಗೆ ಕಳ್ಸಿಕಿಲ್ಲೆ ನಾ ಪೇಟೆನ ಇಂಗ್ಲೀಷ್ ಮೀಡಿಯಂ ಸಾಲೆಗೇ ಕಳ್ಸುದು ಗೊತ್ತಾತಾ ಹಾಂ" ಅಂತ ಹೇಳಿಕಂಡ್ ಕೂಸುನ ಜೆನ್ನಿಗೆ ಡಬ ಡಬ್ಬನ ಗುದ್ದಿ ಎಳ್ಕಂಡ್ ಅದರ ಕೋಂಬರೆಗೆ ಹೋತು . ಶೈಲನ ಅವತಾರ ಕಂಡ್ ಜಾಂಪ ಇದೆಂತಾ ಕಾಲ ಬಾತ್ ದೇವ್ರೇಂತ ಕಪ್ಪಟೆಗೆ ಕೈ ಮಡ್ಗಿ ಕುದ್ಕಂಡೊ.

ಅಮೆರಿಕಂದ ಬಾವ ದಿನ ಶೈಲನ ಬುಟ್ಟ್ ಎಲ್ಲವ್ರೂ ಕಾರ್ ತಕಂಡ್ ಏರ್ ಪೋರ್ಟ್‌ಗೆ ಹೋಗಿದ್ದೊ. ಕಾರ್ ಬಂದ ಹೋರ್ನ್ ಕೇಳಿ ಹೊರಗೆ ಬಂದ ಶೈಲಂಗೆ ಶಾಕ್! ಅಮೆರಿಕಿರುವ ಇಂಜಿನಿಯರ್ ರಾಣಿ ಕಣ್ಣಿಗೆ ಸನ್ ಗ್ಲಾಸ್ ಹಾಕಿ ಜೀನ್ಸ್ ಪೇಂಟ್ ಟೀಸರ್ಟ್ ಹೈ ಹೀಲ್ಸ್ ಚಪ್ಪಲ್ ಹಾಕಂಡ್ ಬಾದರ ಗ್ರೇಸಿಕಂಡ್ ಇದ್ದದಕ್ಕೆ ನೋಡಿ ಮೂಕ್ನ ಮೇಲೆ ಬೆರ್ಳ್ ಮಡುಗುವಾಂಗೆ ಆತ್ ಸಾದಾರ್ಣದ ಸೀರೆ ಉಟ್ಟ್ ಕೈಗೆ ಬಳೆ ಹಾಕಿ ಹಣೆಗೆ ಲಕ್ಷಣಾಗಿ ಬೊಟ್ಟ್. ಕಂಡದಾಂಗೆ ನಿಂತತ್ ಶೈಲ. ಹೇಂಗೊಳರಿ ಅಕ್ಕಾಂತ ಕಾಲ್ ಹಿಡ್ತ್ ಅಮೆರಿಕಾದ ಬಂದದ್ ಮೈದುನನೂ ಕಾಲ್ ಹಿಡ್ತ್ . ಆ ಪೊಡಿ ಕೂಸುನ ಕೈಲೂ ಎಲ್ಲರ ಕಾಲ್ ಜಾಮಿ ಮಾಡ್ತಂತ ಕಾಲ್ ಹಿಡ್ಸಿದರಕಂಡ್ ಸದ್ದಿಲ್ಲದೆ ಜಾಗ ಕಾಲಿ ಮಾಡ್ತ್ ಶೈಲ.

ಅಷ್ಟ್ ವರ್ಸ ಅಮೆರಿಕಲಿ ಇದ್ದೊವ್ರು ಯಾವ ಯಾವ ಸ್ಟೈಲಿ ಮೋಡರ್ನ್ ಆಗಿ ಬರುವೋಂತ ಗ್ರೇಸಿಕಂಡ್ ಇದ್ದ ಶೈಲಂಗೆ ಬಾರೀ ನಿರಾಸೆ ಆದಾಂಗೆ ಆತ್ ಇಂಜಿನಿಯರ್ಗ ದೊಡ್ಡ ಕಂಪನಿಲಿ ಒಳ್ಳೆ ಕೆಲ್ಸ ದೊಡ್ಡ ಸಂಬಳಲಿ ಇರೊವ್ರು ಆದರೆ ಏನ್ ಅವರ ಕ್ರಮಲಿ ವೇಸ ಬೂಸಣಲಿ ಮಾತ್ರ ಯಾವ ಯತ್ಯಾಸನೂ ಇಲ್ಲೆ . ಗಂಡ ಹೆಣ್ಣ ಬುಡಿ. ಆ ಸಣ್ಣ ಕೂಸು ಸಾನ್ ಅರೆಬಾಸೆನ ಲಾಯಿಕ್ಕ್ ಮಾತಾಡ್ತೆ ಯಾವ ದೊಡ್ಡಸ್ತಿಕೆ ದೌಲತ್ತ್ ಯಾರಲ್ಲಿನೂ ಇಲ್ಲೆ ಮೋಹನ ಲಾಪ್ ಟಾಪ್ ಮಡ್ಸಿಕಂಡ್ ಕೋಂಬರೆಲಿ ಕುದ್ದ್ ಕಂಡೇ ಇರ್ದೊಂತ ಗ್ರೇಸಿರೆ ಆಂವ ಹಳ್ಳಿವರಾಂಗೆ ಅಣ್ಣನೊಟ್ಟಿಗೇ ಗದ್ದೆ ತೋಟಾಂತ ಸುತ್ತಿಕಂಡ್ ಇದ್ದ. ಅವನ ಹೆಣ್ಣ್ ಶೋಭನೋ ಬನಾರ್ ಮನಾರ ಮಾಡಿಕಂಡ್ ಪಾತ್ರೆ ತೊಳ್ಕಂಡ್ ಅಡಿಗೆ ಮಾಡಿಕಂಡ್ ಇದ್ದದೆ. ಕಾಲ್ ಮೇಲೆ ಕಾಲ್ ಹಾಕಿ ಕುದ್ದ್ ಕಂಡ್ ಮೊಬೈಲ್ಲಿ ಮೆಸೆಜ್ ಕಳ್ಸಿಕಂಡೋ ಟಿವಿ ನೋಡಿಕಂಡೋ ಇರ್ದರ ಕಂಡತ್ತೆ. ಆ ಸಣ್ಣ ಕೂಸುನೂ ಅಮೇರಿಕಲೇ ಹುಟ್ಟಿ ಬೆಳ್ದತ್‌ತ ಯಾರೂ ಹೇಳ್ಕಿಲ್ಲೆ ಇಂಗ್ಲೀಷ್‌ಲಿ ಟ್ವಿಂ ಟ್ವಿಂಯಿತಾ ಮಾತಾಡಿಕಂಡ್ ಮೊಬೈಲ್‌ಲಿ ಗೇಮ್ಸ್ ಆಡಿಕಂಡ್ ಇರ್ದೊಂತ ಗ್ರೇಸಿರೆ ಅರೆಬಾಸೆಲಿ ನಮ್ಮ ಮಾಗ್‌ಂದಲೂ ಸೊಲ್ಟರ್ಲಿ ಮಾತಾಡಿಕಂಡ್ ಅಂಗಳಲಿ ಕೆಲ್ಸದವರ ಮಕ್ಕಳೊಟ್ಟಿಗೂ ಆಡ್ತೆ. ತಂಗೆನ ಪ್ರೀತಿಲಿ ಮಾತಾಡ್ಸಿಕಂಡ್ ಅಟಕ್ಕೆ ಕರ್ಕಂಡದೆ ಮೀಯ್ಸಿ ಬಂದಂದ ದೇವ್ರ ಕೋಂಬರೆಗೆ ಹೋಗಿ "ಅಸತೋಮ ಸದ್ಗಮಯ...." ಅಂತ ಶ್ಲೋಕ ಹೇಳ್ತೆ.

ಮೋನ ಅವ್ವ ಅಪ್ಪನ ಅಮೇರಿಕಲಿ ಕರ್ಕಂಡ್ ಹೋಪೇಂತ ಹೇಳ್ತಾ ಉಟ್ಟು . ಶೋಭನೂ ಅತ್ತೆ ಮಾವನ ನಮ್ಮೊಟ್ಟಿಗೆ ಬನ್ನಿ ಒಂದು ತಿಂಗಾರ್ ಅಮೆರಿಕದ ಇದ್ದ್ ಬನ್ನಿ. ಇದಾನಲಿ ಕುದ್ದಾಂಗೂ ಆತ್ ದೇರೆ ದೇಶ ನೋಡ್ದಾಂಗೂ ಆತ್‌ಂತ ಒತ್ತಾಯ ಮಾಡ್ತೆ . ಅದರೆ ಇವ್ರುಕೆ ಮಾತ್ರ ಈ ಮನೆ ಊರ್ನ ಬುಟ್ಟ್ ಹೋಕೇ ಮನಸ್ಸಿಲ್ಲೆ. ಸಾವಾಗ ಈ ಹೋಪ ಕಾಲಲಿ ಯಾವ ದೇಸನೂ ಬೇಡ ಏನೂ ಬೇಡ ಇಲ್ಲೆ ಹೊರ್ಟ್‌ನಲಿ ಒಮ್ಮೆ ದೇವ್ರು ಕರ್ಕಂಡರೆ ಸಾಕ್‌ಂತ ಹೇಳುವೆ. ಅವ್ರ

ಬಾರದೂ ನೀವು ಎಲ್ಲವೂ ಒಮ್ಮೆ ಅಮೇರಿಕಕ್ಕೆ ಕಂಡಿತಾ ಬರೋಕೆ ಆಕ್ಕಾಂತ ಶೋಭ ಒತ್ತಾಯ ಮಾಡ್ತೆ. ಅದ್ ಬೇರೆ ಬಾಯಿ ಉಪಚಾರದಂಗೆ ಕಾಂಬೊಡ್ಲೆ ಹೃದಯಿಂದ ಬಂದ ಮಾತ್‌ಂತ ಗೊತ್ತಾದೆ. ಇಲ್ಲಿ ಬೇಕಾದಸ್ಟ್ ಇದ್ದರೂ ಅಪ್ಪ ಅಪ್ಪನ ಮೊದ್ಲಿಗೆ ಅವ್ವೆ ಇದ್ದೆಂತ ದುಡ್ಡುನೂ ಕಳ್ಸಿಕಂಡೇ ಇದ್ದವೆ.

ಶೋಭನ "ಶೋಭೆ" ಶೈಲಿನ ಮೇಲೆ ಬಿದ್ದ್ ಮನ್ಸ್‌ಲಿ ಒದ್ದಾಟ ಹೊಯ್ದಾಟ ಸುರುವಾತ್ . ಎಸ್ಟೊತ್ತಿಗೆನೂ ಕುಲುಕುಲು ಹೇಳಿಕಂಡ್ ಎಲ್ಲರೊಟ್ಟಿಗೆನೂ ನೆಗೆಮೋರೆಲಿ ಪ್ರೀತಿಂದ ಎಲ್ಲವೂ ನಮ್ಮೊವೇಂತ ಮಾತಾಡ್ಸಿಕಂಡ್ ಕೆಲ್ಸಗಳ ಹುಡ್ಕಿ ಹುಡ್ಕಿ ಮಾಡುವ ಶೋಭ ಎಲ್ಲಿ ಅತ್ತೆ ಬೊತ್ತದಿದ್ದರೂ ಅಡ್ಡೆ ಪಡ್ಡೆ ಮಾಡಿಕಂಡಿರ್ಕನ ಮಲ್ಕಂಡೋ ಟಿವಿ ನೋಡಿಕಂಡೋ ಇರುವ ನಾ ಎಲ್ಲಿ? "ಕೆಸದ ಸೊಪ್ಪುನ ಮೇಲೆ ಇರುವ ನೀರ್ ಹನಿನಾಂಗೆ" ಅಮೇರಿಕಲಿದ್ದರೂ ಅಲ್ಲಿಯ ಸಂಸ್ಕೃತಿಗೆ ಅಂಟಿಕಣದೆ ನಮ್ಮ ದೇಸದ ಸಂಸ್ಕೃತಿ ಬಾಸೆ ಆಚಾರ ವಿಚಾರಗಳ ಒಂದೂ ಬುಡದೆ ಇರುವ ಶೋಭಂಗೂ ದೇವರ ಹಾಂಗೆ ಇರುವ ಅತ್ತೆ ಮಾಂವ ಒಳ್ಳೆ ಮನೆ ಮನೆತನ ಪರಿಸರ ಇದ್ದೂ ಅದರ ಸಸಾರ ಮಾಡಿ ಕಾಲ್ ಕಸದಾಂಗೆ ಕಾಂಬ ನಂಗೂ ಇರುವ ಎತ್ಯಾಸನ ಲೆಕ್ಕ ಹಾಕಿ ಹಾಕಿ ಸಾಕಾತ್! ಆಕೇರಿಗೆ ತನ್ನ ದುರ್ಗುಣಗಳೇ ಬಂದ್ ಮನ್ಸ್‌ನ ಎದ್ರ್ ನಿತ್ತ್ ಹಂಗ್ಸಿದಾಂಗೆ ಆಕೆ ಸುರಾತ್! ಇದರ್‌ಂದ ಸೋತ್ ಸುಣ್ಣಾತ್ ಶೈಲ!!

ಮೋನ ಶೋಭನವು ಅಮೇರಿಕಕ್ಕೆ ಹೊರ್ಡುವ ದಿನ ಬಂದೇ ಬುಟ್ಟುತ್. ನಾವು ಬಂದವೇಂತ ಹೇಳ್ಕನ ಕಣ್ಣೀರ್ ತುಂಬಿ ದೊಂಡೆ ಕಟ್ಟಿದಾಂಗೆ ಆತ್ "ನೀವು ಒಮ್ಮೆ ಅಮೇರಿಕಕ್ಕೆ ಬಂದೇ ಬರೊಕು ಅಕ್ಕಾಂತ" ಹೇಳಿ ಕಾಲ್ ಹಿಡ್ದ್ ಇಸ್ಸು ತಡಿಯಕೆ ಬೊತ್ತೂಂತ ತಂಗೆ ಶೋಭನ ಕೈನ ಗಟ್ಟಿ ಹಿಡ್ಕಂಡ್" ನೀ ಪ್ರಾಯಲಿ ನಂಗಿಂತ ಸಣ್ಣಂವ ಆದರೂ ನಿನ್ನ ಸಂಸ್ಕಾರ ಗುಣ ನಡ್ತೆಲಿ ನಂಗಿಂತ ದೊಡ್ಡವ್ಳು ಆಗೊಳ ನೀ ಬಂದ ಮೇಲೆ ನಿನ್ನ ರೀತಿ ನೀತಿನ ನೋಡಿ ಸುಕಂತ ಹೇಳ್ರೆ ಎಂತದ್ ಅದ್ ಹೇಂಗೆ ಸಿಕ್ಕುದೂಂತ ಗೊತ್ತಾತ್. ಖಂಡಿತಾ ನಾ ಬದ್ಲಾನೆ. ಈ ಮನೆಗೆ ಒಪ್ಪುವ ಸೊಸೆಯಾಗಿ ಬಾಳಿ ತೋರ್ಸಿನೆ. ಈಗ ನಂಗೆ ಗೊತ್ತಾತ್ ಸಣ್ಣದಿರ್ಕನ ಮಕ್ಕಳಿಗೆ ಎಂತಾ ಶಿಕ್ಷಣ ಕೊಡೊಕು. ಕೊಡದ್ರೆ ಅವು ಹೇಂಗೆ ಆದವೇಂತ ಹೇಳ್ದಕ್ಕೆ ನಾನೇ ಸಾಕ್ಷಿ. ನಾ ಈಗ ಪಸ್ಚಾತ್ತಾಪದ ಕಿಚ್ಚಲಿ ಬೆಂದ್ ಸುದ್ದ ಆಗೊಳೆ. ನನ್ನ ತೊಪ್ಪುನ ಅತ್ತೆ ಮಾಂವ ಹೊಟ್ಟೆಗೆ ಹಾಕೊಣೂಕೂಂತ ಮರ್ಕ್ಯಂಡ್ ಹೇಳ್ಕನ. ಅತ್ತೆ ಬಂದ್ ತೊಬ್ಬಿಕಂಡ್ ಕಣ್ಣೀರ್ ಹಾಕ್ಟಡ. ನೀ ನಮ್ಮ ಮನೆನ ಬೆಳ್ಗುವ ನಂದಾ ದೀಪಂತ ಹೇಳ್ಕನ ಎಲ್ಲರ ಮೊರೆಲೂ ಸಮಾದಾನದ ನೆಗೆ ಮೂಡ್ತ್. ❑

---

## ದಿಬ್ಬಣದೂರ್ಲಿ ಸಾವ್‌ನ ಸೂತ್ಕ

(2018ರ ಆಗಸ್ಟ್ ತಿಂಗಳ್‌ಲಿ... ನಮ್ಮ ಸುತ್ತ ಮುತ್ತ ನಡ್ದ
ಭೂ ಉತ್ಪಾತ, ಜಲಪ್ರಳಯನ ಕಂಡ್ ಹುಟ್ದ ಕವನ ಇದ್)



**–ಕೃಪಾ ದೇವರಾಜ್**
ಮಡಿಕೇರಿ

ಬೆಟ್ಟನೇ ಕರ್ಗೀ... ಹರ್ದುಟ್ಟೂತೇಲ್ರೇ...
ಇದ್ ಕವಿನ ಭಾಷೆ ಅಲ್ಲ, ಕಟುವಾಸ್ತವ.
ಮಣ್ಣ್‌ನ ಹೊಳೆಲೀ.. ಹೆಣಾ ತೇಲ್ತಾ ಉಟ್ಟೂತೇಲ್ರೇ...
ಕಟು ಸಾಹಿತ್ಯ ಅಲ್ಲಾ... ಕಣ್ಣ್ ಎದ್ರುನ ಸತ್ಯ!
ಅತ್ತ ಭೂಮಿ ಕುಸ್ಯಕನ, ಇತ್ತ ನೀರ್ ಏರ್‌ಕನ...
ಕಣ್ಣ್ ಕತ್ತಲಿಡ್ಕನ. ಆ... ಭಗವಂತಸನ ಬಾರಬಿರ್ಕನ...
ನೆಲೆ–ನೆಲ ಎಲ್ಲಾ ಜಲಸಮಾಧಿಯಾಕನ
ಮುಂದಿನ ಬದ್ಕುಗೆ ಎಲ್ಲುಟ್ಟು ಬೆಲೆ???
ಅಂದ್, ಬೆಟ್ಟ ಹತ್ತಿ, ಗುರಿ ಮುಟ್ಟಿ,
ಬೆಟ್ಟದ ನೆತ್ತಿ ಮೇಲೆ ಕುಣಿಯಕನ
ಗೊತ್ತಿತ್ತೇ..., ಅದೇ ಬೆಟ್ಟ, ಮುಂದೆಯಾಗಾರೂ
ನಮ್ಮೇ ತಲೆ ಮ್ಯಾಲೆ ಕುಸ್ದದೆತ!
ಅಂದ್, ಕೇಳ್ಕನ ಕುಸಿ ಆಗಿದ್ದ ನೀರ್‌ನ ಜುಳುಜುಳೂ ಸದ್ದೂ
ಇಂದ್ ಕರ್ಣ ಕಠೋರ ಆಗುಟ್ಟೂ...

ಬದ್ದೂಕ... ಭೂತಾಯಿನ ಒಡ್ಲೊಳ್ಗೆ ಸದ್ದೂ
ಸೇರಿದುನ ನೋಡಿ ಹಸ್ವು ಸತ್ತುಟ್ಟೂ...
ಗುಡ್ಡೆ... ಮೈ ಕೊಡ್ಡಿದ್ ಗುಡ್ಡನ ನೋಡಿ
ಹೆದ್ರೀ... ನಿದ್ರೆ ಹಾರುಟ್ಟೂ...
ಮದ್ವೆ ದಿಬ್ಬಣದಂತಿದ್ದ ದಿಬ್ಬಗಳ ನನ್ನೂರು...
ಮಡಿಕೇರಿಲಿ ಅಂದ್... ಸಾವ್‌ನ ಮನೆ ಕಳೆ
❑

## ಕೋರಿಕೆ



–ಬೈಲೇರಾ ಸ್ಫೂರ್ತಿ
ಬಿಳಿಗೇರಿ ಗ್ರಾಮ, ಮಡಿಕೇರಿ ತಾಲೂಕು

ಪ್ರೀತಿನ ಜನಾಂಗ ಬಾಂದವುಕೆ
ನನ್ನದೊಂದು ಸಣ್ಣ ಕೋರಿಕೆ
ಈಗ ಬನ್ನೆ ನೋಡಿ ನಾನ್ ವಿಷಯಕೆ

ನಾನು ನೋಡ್ದಂಗೆ ಎಷ್ಟೋ ಜನ ಪುಟ್ಟ ಮಕ್ಕಳಿಗೆ
ಮನೆಲಿ ಕನ್ನಡನೇ ಕಲ್ಸುದ್ಯಾಕೆ?
ನಮ್ಮ ಬಾಸೆ ಮಾತಾಡಿಕೆ ನಿಮಿಗ್ಯಾಕೆ ನಾಚಿಕೆ?
ಅರೆಬಾಷೆ ಮಾತಾಡ್ರೆ ಖಂಡಿತಾ ಕಡಿಮೆಯಾದುಲೆ ಶ್ರೀಮಂತಿಕೆ.

ನಾವ್ಯಾರ್ ಆ ಬಾಷೆ ಬ್ಯಾಡ ಈ ಬಾಷೆ ಬ್ಯಾಡಂತ ಹೇಳಿಕೆ
ಎಲ್ಲಾ ಬಾಷೆನೂ ಬೇಕೆ ಬೇಕು ಅವರವರ ಜೀವನಕ್ಕೆ
ಆದರೂ ಮನೆ ಭಾಷೆನ ಮಾತ್ರ ಆಗದ್ ಎಂದೂ ಮರಿಯಕೆ.

ಬಾಷೆ ಪದ್ಧತಿ ಪರಂಪರೆಲಿ ಖಂಡಿತಾ ಬ್ಯಾಡ ದೊಡ್ಡಸ್ತಿಕೆ
ಸಣ್ಣದರ್‌ಂದನೆ ಅಬ್ಯಾಸ ಮಾಡೋಕು ಇದರ್ಲೆಲ್ಲಾ ಉಳ್ಸಿಡೆಕ್ಸಿಕೆ
ಎಷ್ಟೋ ಮಾಧ್ಯಮಗಳ ವ್ಯವಸ್ಥೆ ಉಟ್ಟು ಇಂದ್ ನಿಮಿಗೆ ತಿಳ್ಸಿಕೆ.

ಕೆಲವು ಜನ ಹೋಗಿ ನೆಲ್ಸಿರೂ ವಿದೇಶಕ್ಕೆ
ಹುಟ್ಟು ಭಾಷೆ ಮರಿಯದುಲೇ ಖುಷಿಲೇ ಮಾತಾಡಿಕೆ
ಇದ್ ನಿಜವಾದ ಹೆಮ್ಮೆತೇಳ್ರೆ ಗೌಡ ಜನಾಂಗಕ್ಕೆ

ಬರ್‍ತಾ ಉಟ್ಟು ಈ ಸಮ್ಮೇಳನದ ಸ್ಮರಣ ಸಂಚಿಕೆ
ಮರಿಬೇಡಿ ನೀವೂ ಮಾತ್ರ ತಕಂಡ್ ಓದಿಕೆ
ಎಲ್ಲಾವುಕು ದಾರಿ ದೀಪ ಆಗಲಿಂತೇಳಿ ನನ್ನ ಹಾರೈಕೆ ❑

## ನನ್ನವ್ವ ಭಾರತಿ



–ಕೊಟ್ಟಕೇರಿಯನ ಲೀಲಾ ದಯಾನಂದ
ಮಡಿಕೇರಿ

ಪುಣ್ಯ ಮಾಡಿಯೊಳೊ ಜಲ್ಮ ಪಡಿಯಕೆ
ಅವ್ವ ನಿನ್ನಯ ಮಟ್ಟೆಲಿ
ರಾಮ ಕೃಷ್ಣ ಬುದ್ಧ ಬಸವ
ಹುಟ್ಟಿ ಹರ್‌ಸಿದ ಮಣ್ಣ್‌ಲಿ
ಗಡ್‌ಸ್‌ಲುಟ್ಟು ಸೂರ ಸೈನಿಕ
ಭಾರತಾಂಬೆನ ಗ್ಯಾನಲಿ
ಗಂಡುಗಲಿಗಳ ರಕ್ತ ಹರ್ ದುಟು
ತ್ಯಾಗ ಮೆರ್‌ದುಟು ನಾಡ್‌ಲಿ
ಹಿಮದ ಜೊಂಪೆ ಬಡಗ್ ದಿಕ್ಕ್‌ಲಿ
ಸಿವನೆ ಕುದ್ದ್‌ಟ್ ಕುಂದ್‌ಲಿ
ಸೇಲೆ ಮಾಡಿಕೆ ಮೋಡ ಸಾಲ್‌ಲಿ
ಕನ್ಯಾಕುಮಾರಿ ತೆಂಕ್‌ಲಿ
ಕಾವೇರಿ ತುಂಗೆ ನರ್ಮದೆ ಗೋದಾವರಿ
ಹರ್‌ದ್ ಪಾಪನ ತೊಳೆತೊಳೊ
ಪೈರು ಪಚ್ಚೆಗೆ ಜೀವ ತುಂಬ್‌ಸಿ
ನಮ್ಮ ಕಣ್‌ಮನ ತುಂಬ್ಯೊಳೊ
ಹಿಂದೂ ಕ್ರೈಸ್ತ ಮುಸ್ಲಿಂ ಸಿಖ್ಖ
ಎಲ್ಲ ಕೂಡಿ ಬಾಳ್‌ವೆ
ಎಷ್ಟ್ ಬಾಸೆಗ ಇದ್ದರು ಸನ
ನಗೆಗೆ ಎಲ್ಲವೂ ಸೋತವೆ
ನೋಡ್ ಮೂಡಲಿ ಸೂರ್ಯ ಬೆಳ್‌ಗಿದೆ
ಗಾಳಿ ಉಸ್‌ರ್‌ನ ಕೊಟ್ಟದೆ
ಚಂದ್ರ ಭೂಮಿಗೆ ತಂಪ್ ತಂದದೆ
ಎಲ್ಲೂ ಸಮ್ಮಾನ ಮಾಡದೆ
ಒಂದೇ ಗಾಳಿ ಒಂದೇ ನೀರು
ಕೆಂಪು ರಕ್ತನೆ ಸರ್‌ರಲಿ
ಹಂಗೆ ಇರ್‌ಕನ ಭೇದ ಮಾಡದೆ
ಬಾಳೊನೊ ನಾವ್ ಒರ್ಮೆಲಿ ❑

# ತಾನೊಂದು ಬಗೆದರೆ



–ಕಟ್ರತನ ಲಲಿತಾ ಅಯ್ಯಣ್ಣ
ಗೌಳಿಬೀದಿ, ಮಡಿಕೇರಿ

"ನಮಸ್ಕಾರ ಸಾರ್"
"ಏಹೋ ಏನ್ ಬ್ರೋಕರ್ ರಾಜಣ್ಣನವು ಅಪರೂಪಕ್ಕೆ ಆಫೀಸ್‌ಗೆ ಬಂದು ಬಿಟ್ಟೋಳಿ"
"ಹೇ.. ಹೇ.. ಹಂಗೇನಿಲ್ಲೆ. ಅಂದ್ ಸಿಕ್ಕ್‌ಕಾಕನ ಸೈಟ್ ಎಲ್ಲಾರ ಇದ್ದರೆ ಹೇಳ್ ತೇಳಿದ್ರಿ ಅಲಾ ಒಂದ್ ಸೈಟ್ ಇತ್ತ್. ನಿಮಿಗೆ ಹೇಳೊನಾತ ಬಂದೆ"
"ಹೌದಾ ಎಲ್ಲಿ ರಾಜಣ್ಣ, ಇಲ್ಲೆ ಹತ್ರಲಿ ಎಲ್ಲರ ಇದ್ದರೆ ಹೇಳಿ"
"ಹೆಚ್ಚ್ ದೂರ ಏನಿಲ್ಲೆ. ಬಸ್‌ಸ್ಟ್ಯಾಂಡ್, ಆಸ್ಪತ್ರೆ ಪ್ರತಿಯೊಂದಕ್ಕು ಹತ್ರಲೇ ಉಟ್ಟು"
"ಹೌದಾ ಹಂಗಾರೆ ನೋಡೊನ. ರೇಟ್ ಜಾಸ್ತಿ ಇಲ್ಲೆತಾನೆ"
"ನಾನ್ ಸರಿ ಮಾಡಿಕೊಟ್ನೆ ಬುಡಿ, ಲೋನ್ ಮಾಡಿ ಆರಾಮಾಗಿ ತಕಣಕ್"
"ಸರಿ ರಾಜಣ್ಣ ರೆಕಾರ್ಡ್ ಎಲ್ಲಾ ಪಕ್ಕಾ ಉಟ್ಟುತಾನೆ"
"ಎಲ್ಲಾ ಸರಿ ಉಟ್ಟು, ಸಾರ್, ಏನ್ ತೊಂದ್ರೆನೂ ಇಲ್ಲೆ ಆದರೆ...."
"ಆದರೆ ಎಂತ?"
"ಇಪ್ಪತ್ತ್ ಸೆಂಟ್ ಜಾಗ ಉಟ್ಟು, ಎಲ್ಲಾ ಒಟ್ಟಿಗೆ ಮಾರಿ ದುಡ್ಡ್ ಬೇಕ್ ಅವ್ಕೆ"
"ಅಯ್ಯೊ ಹಂಗಾರೆ ಬ್ಯಾಡ ಬುಡಿ, ಅಷ್ಟಲ್ಲಾ ನನ್ನತ್ರ ಎಲ್ಲಿಂದ ಬರಕು"
"ನೀವ್ ಒಬ್ಬರೇ ಯಾಕ ಸಾರ್, ಬ್ಯಾರೆ 4–5 ಜನಕ್ಕೆ ಹೇಳಿ ಎಲ್ಲಾ ಒಟ್ಟಿಗೆ ಸೇರಿ ತಕಣಕ್"
"ಸರಿ ರಾಜಣ್ಣ ನಂಗೆ ತುಂಬಾ ಕೆಲ್ಸ ಉಟ್ಟು, ಯೋಚನೆ ಮಾಡಿ ಹೇಳ್ನೆ"
ಸರಿ ಸಾರ್ ನಾನ್ ಎರ್ಡ್ ದಿನ ಬುಟ್ಟ್ ಬನ್ನೆ"

ಮೋಹನ್‌ಗೆ ಬಾಳಾ ದಿನಂದ ಒಂದ್ ಸೈಟ್ ತಕಂಡ್ ಸ್ವಂತ ಮನೆ ಕಟ್ಟುವ ಕನ್ಸ್. ಆದರೆ ಬರ್ವ ಸಂಬಳ ಉಳಿತಾಯ ಮಾಡಿಕೆ ಆಗಿತ್ತ್‌ಲೆ. ಸಾಲ ಆದರೂ ಮಾಡಿ ಸೈಟ್ ತಕಣಕುತೇಳ್ವ ಹಂಬಲ ಮನ್ಸ್‌ಲಿ ಮೂಡ್ತ್. ಆದರೆ ಇಪ್ಪತ್ತ್ ಸೆಂಟ್ ಜಾಗಕ್ಕೆ ಜನ ಬೇಕಲ್ಲಾ. ಏನ್ ಮಾಡಕುತ ತಿಳಿಯದೆ ಒದ್ದಾಡ್ತ್.

ಕಡೆಗೆ ಆಫೀಸ್‌ಲಿ ಎಲ್ಲರ್ನ ಕೇಳ್ತ್. ಕೆಲವು ಒಪ್ಪಿದೊ. ಮೋಹನನ ಕನ್ಸ್‌ಗೆ ಗರಿ ಮೂಡ್ತ್.

ಆದರೆ ಆಫೀಸ್‌ಲಿ ಕುತಂತ್ರಿತ ಹೆಸ್ರಾಗಿದ್ದ ನಾಗಪ್ಪ ಸ ಸೈಟ್ ತೆಗಿಯಕೆ ತಯಾರಾದ್. ಯಾರಿಗೂ ಇಷ್ಟ ಆತ್‌ಲೆ. ಆದರೆ ವಿಧಿ ಇತ್ತ್‌ಲೆ. ಸೈಟ್ ಖರೀದಿ ಮಾಡಿಕೆ ಜನ ಬೇಕಿತ್ತ್. ಆದ್ರಂದ ಎಲವೂ ತಮ್ಮ ಪಾಡಿಗೆ ಇದ್ದರೆ ಆತ್ ತೇಳಿ ಸುಮ್ಮನೆ ಆದೊ.

ರಾಜಣ್ಣ ಮೂಲಕ ಆಫೀಸ್‌ನವೇ ಸೇರಿ ಎಲ್ಲಾ ಸೈಟ್‌ಗಳ್ನ ರಿಜಿಸ್ಟರ್ ಮಾಡಿಕೊಂಡೊ. ಮತ್ತೆ ಯಾವ ಸೈಟ್ ಯಾರಿಗೆ ತೇಳ್ವ ಸಮಸ್ಯೆ ಉಂಟಾತ್. ಕಡೆಗೆ ಲಾಟರಿ ಹಾಕಿ ಸೈಟ್ ಹಂಚಿಕೆ ಮಾಡಿಕೊಂಡೊ. ನಾಗಪ್ಪನ ಪಾಲಿಗೆ ಬಂದ ಸೈಟ್ ಅವಂಗೆ ಸಮಾಧಾನ ಆತ್‌ಲೆ. ಅಂದ್‌ಂದೇ ಅವನ ಕುತಂತ್ರಿ ಬುದ್ಧಿ ಶುರುವಾತ್.

ಅವರವರ ಸಾಮರ್ಥ್ಯಕ್ಕೆ ತಕ್ಕಂಗೆ ಎಲ್ಲವೂ ಮನೆ-ಕಟ್ಟಿಕಂಡ್ ನೆಮ್ಮದಿಲಿ ಇದ್ದೊ. ಆದರೆ ನಾಗಪ್ಪ ಅಕ್ಕಪಕ್ಕದ ಸೈಟ್‌ನವ್ಕೆ ಬಾಳಾ ಕಾಟ ಕೊಡ್ತಿತ್ತ್. ವಿನಾಕಾರಣ ಕಾಲ್‌ಕೆರ್ಕನ್‌ಡ್ ಜಗಳ ಮಾಡ್ವು. ತೊಂದರೆ ಕೊಡ್ವು, ಸೈಟಿನ ಗುರ್ತಿಗೆ ಹಾಕಿದ ಕಲ್ಲನ ತೆಗ್ಗಿಸಿ ಇಡ್ವು, ನೀರ್, ಚರಂಡಿ. ಹಿಂಗೆ ಪ್ರತಿಯೊಂದಕ್ಕೂ ಜಗಳ ಮಾಡ್ತಿತ್ತ್.

ಆಫೀಸ್‌ಲಿ ಸ ಕೆಲವ್ ಕೆಲ್ಸಕ್ಕ ಬಾರದವರ್‌, ಗುಂಪು ಕಟ್ಟಿಕಂಡ್ ರಾಜಕೀಯ ಮಾಡ್ತಿತ್. ಇವನ ದುರ್ಬುದ್ಧಿಗೆ ಅವ್ನ ಸಂಸಾರದವೇ ಅವನ ದೂರ ಮಾಡಿದ್ದೊ. ಕೇಡ್. ಸೇಡ್‌ನ ಮನೋಭಾವ. ಬೇರೆಯವು ಲಾಯ್ಕ ಇರ್ದನ ಅಂವ ಸಹಿಸ್‌ತಿತ್ಲೆ ಅಷ್ಟ್ ಕೀಳ್ ಮಟ್ಟದ ಮನಸ್ಥಿತಿ ಯುವನಾಗಿತ್.

ಈ ನಡುಲಿ ವರ್ಷ ಕಳ್ದಿತ್. ಮತ್ತೆ ನಾಟಕ ಆಡಿ ಇನ್ಸ್ ಸ್ವಲ್ಪ ದಿನಲಿ ಸತ್ತೇ ಹೋನೆತ ಹೇಳಿ ವರ್ಗ ಮಾಡ್ಸಿಕಂಡ್ ವಾಪಾಸ್ ಬಂದಿತ್ ಅಂವ ಎಲ್ಲಪ್ಕಂತ ಮುಂದೆ ಮನೆ ಕಟ್ಟಿದ್ರಂದ ಅಕ್ಕಪಕ್ಕದವು ಮನೆ ಕಟ್ಟ್‌ಕನ ಹೊಟ್ಟೆಕಿಚ್ಚ್‌ಂದ ಇಲ್ಲದೆ ಕಿರುಕುಳ ಕೊಡ್‌ತಿತ್. ಒಟ್ಟ್‌ಲಿ ಅವಂದಾಗಿ ವಠಾರಲಿ ಯಾರಿಗೂ ನೆಮ್ಮದಿ ಇತ್ಲೆ.

ದೇವ್ರು ಅವಂಗೂ ಅವ್ನ ಸಂಸಾರಕ್ಕೂ ಆಗಾಗ ಕಷ್ಟ ಕೊಡ್‌ತಿದ್ದರೂ ಅವ್ನ ಕೆಟ್ಟ ಚಾಳಿನ ಬಿಡ್‌ತಿತ್ಲೆ. ಬದ್ಲಿಗೆ ತನ್ನ ಕಷ್ಟಗಳಿಗೆ ಬೇರೆಯವು ಕಾರಣ ತೇಳಿ ಅವ್ಕೆ ಮತ್ತಷ್ಟ ಕಷ್ಟಕೊಟ್ಟ್ ತನ್ನ ಪಾಪದ ಕೊಡನ ತುಂಬಿಕಣ್ತಿತ್. ಸುಮಾರ್ ಜನ ಅವಂಗೆ ಬುದ್ಧಿ ಹೇಳಿಕೆ ನೋಡ್ದೊ. ನಮಿಗೆ ಜವಾಬ್ದಾರಿ ಬಂದ್ ವಯಸ್ಸಾಗ್ ತಿದ್ದಂಗೆ ಸಂಕುಚಿತ ಮನೋಭಾವಂದ ಸಣ್ಣತನ ತೋರ್ಸುದು ಸರಿ ಇರ್‍ದುಲೆ. ಮೊಸ್ಸನ ಜೀವ್ನ ನೀರ್‌ನ ಮ್ಯಾಲೆನ ಗುಳ್ಳೆನಂಗೆ. ಯಾಗ ಬೇಕಾರೆ ಒಡ್ಡ್ ಹೋದೆ. ಇರ್‍ವಷ್ಟ್ ದಿನ ಎಲ್ಲವರೊಟ್ಟಿಗೆ ಚೆನ್ನಾಗಿರಕುತೇಳಿ ಬುದ್ಧಿ ಹೇಳ್ರೂಹುಟ್ಟುಗುಣ ಸತ್ತರೂ ಹೋಕಿಲೆತ ತೇಳ್ವ ಗಾದೆ ನಿಜ ಆಗಿತ್. ಆದರೂ ನೆರೆಕರೆಯವು ಅವನ ಕಾಂಬಕನ ಮಾತಾಡ್ಸ್‌ತಿದ್ದೊ.

ಕಡೆಗೆ ಒಂದ್ ದಿನ ಅವನ ಪಾಪದ ಕೊಡ ತುಂಬಿತ್‌ತ ಕಂಡದೆ ಅವಂಗೆ ಬರಬಾರದ ಕಾಯಿಲೆ ಬಂದ್ ಹಾಸಿಗೆ ಹಿಡ್ದ್ ನರಳಿ ನರಳಿ ಕಣ್ಣ್ ಮುಚ್ಚಿ ಎಲ್ಲವ್ಕೂ ಶಾಶ್ವತ ನೆಮ್ಮದಿ ನೀಡ್ತ್. ಸತ್ತಾಗ ಸ ನೆರೆಕರೆಯವೇ ಓಡಾಡಿ ಕೆಲ್ಸ ಮುಗ್ಸಿದೊ.

ಸಮಾಜಲಿ ಇಂತವು ಎಲ್ಲಾಕಡೆ ಕಾಂಬಕೆ ಸಿಕ್ಕಿವೆ. ಆದರೆ. ತಮ್ಮ ಕರ್ಮಕ್ಕೆ ಬ್ಯಾರೆಯವರ್ನ ಜರಿಯದೆ. ಕೇಡ್ ಬಗಿಯದೆ ಹೊಂದಿಕಂಡ್. ದೇವರ್ ಮೆಚ್ಚುವಂಗೆ ಬಾಳಿರೆ ತಮಿಗೂ ಬ್ಯಾರೆಯವ್ಕೂ ವಳ್ಳೆದ್ ತೇಳಿ ತಿಳಿಯದೇ ಇಲ್ಲೆ. ಮರದ ಕೇಡ್ ಮರಕ್ಕೆತ ಹೇಳ್ವ ಗಾದೆ ನಿಜಕ್ಕೂ ಸತ್ಯ. ತಾನೊಂದ್ ಬಗೆದರೆ ದೇವ್ರ ಆಟನೇ ಬೇರೆ ಇದ್ದದೆ. ❑

# ಹನಿಗವನ

## ಕಾರ್ಯಕ್ರಮ

ಹೊರಗೆ ಎಲ್ಲ ಯುವಕರ ದಂಡು
ಸೇರ್ದುಲೆ ಎಲ್ಲವು ಒಳಗೆ ಬಂದು
ಹೊರಗೆ ಉಟ್ಟು ಕಾರು ನೂರಾರು
ಕಾರೊಳಗೆ ಉಟ್ಟು ಒಪನ್ ಬಾರು



–ಶಾಲಿನಿ ನಿತ್ಯ ಅಯ್ಯೇಟಿರ
ಯಲಹಂಕ, ಬೆಂಗಳೂರು

## ಫೋನ್



ನಗರ ಜೀವನ ಹೈಪೈ
ಎಲ್ಲರ ಮನೇಲಿ ವೈಪೈ
ಎಲ್ಲರ ಕೈಲಿ ಫೋನ್
ಅದು ಸ್ಮಾರ್ಟ್ ಫೋನ್
ರಾತ್ರಿಯಾದಂಗೆ...
ಅಪ್ಪ ಆಕಡೆ
ಅಮ್ಮ ಗೋಡೆಕಡೆ
ಕೂಸು ಕಾಲ್‌ಕಡೆ

# ತಂಗಿಗೆ ಕೊಟ್ಟ ಕಾಣಿಕೆ

– ಕಲ್ಲುಮುಟ್ಲು ಜಶ್ಮಿ ಚಿಂತು
ಕಾಂತೂರು ಮೂರ್ನಾಡ್

ಜೀವನಲಿ ಕೆಲವೊಮ್ಮೆ ಮಾಡುವ ತಪ್ಪುಗ ಬ್ಯಾರೆಯವರ ಬದ್‌ಕ್‌ನ ದೊಡ್ಡ ದುರಂತಕ್ಕೆ ಕಾರಣ ಆದೆ. ಇಂದ್ ನಾನ್ ಹೇಳಿಕೆ ಹೊರಟ ಕಥೆನೂ ಕೂಡ ಅಂತದೆ ಒಂದೂ.

ಅದೊಂದು ದಿನ ನಾನ್ ಸಂತೆಗೆ ಹೋಗಿದ್ದೆ. ಅಲ್ಲೆಲ್ಲಾ ಕಡೆ ತಿರ್‌ಗಾಡಿ ಬಾಕ್‌ನ ಒಂದಷ್ಟ್ ಸಾಮಾನ್ ತಕಂಡ್ ದುಡ್ಡುಕೊಡಿಕೆ ಅಂಗಡಿಯವನ ಹತ್ತಿರ ಹೋದೆ . ಅಲ್ಲಿ ಒಬ್ಬ ಪುಟ್ಟ ಹೈದ ಇತ್ತ್. ಅವಂಗೆ ಸುಮಾರ್ 5 ವರ್ಷ ಆಗಿರ್‌ದು. ಅವನ ಕೈಲಿ ಒಂದ್ ಗೊಂಬೆ ಹಿಡ್‌ಕಂಡ್ ಅದಕೆ ದುಡ್ಡು ಕೊಡಿಕೆ ಅಂಗಡಿಯವನ ಹತ್ತಿರ ಹೋತ್. ಅವ ಕೊಟ್ಟ ದುಡ್ಡುನ ಲೆಕ್ಕ ಮಾಡ್‌ದ ಅಂಗಡಿಯವ ಹೇಳ್‌ತ್. ಪುಟ್ಟ ಇಷ್ಟ್ ದುಡ್ಡಿಗೆ ಈ ಗೊಂಬೆ ಬಾದುಲೆ. ಇನ್ನೂ ದುಡ್ಡು ಇರ್‌ಬುತ. ಆಗ ಆ ಅಂಗಡಿಯವ ಹೇಳ್‌ತ್ ಇಲ್ಲೆ ಪುಟ್ಟ ಇನ್ನೊಮ್ಮೆ ಬಾ ಈ ದುಡ್ಡಲಿ ನಿಂಗೆ ಗೊಂಬೆ ತೆಗೆಯಕೆ ಆದುಲೆತ. ಆದರೂ ಆ ಪುಟ್ಟ ಹೈದಂಗೆ ಅಲ್ಲಿಂದ ಹೋಕೆ ಮನಸಾತ್‌ಲೆ. ಆ ಗೊಂಬೆನ ಹಿಡ್‌ಕಂಡ್ ಅಲ್ಲೆ ನಿಂತಿತ್ತ್.

ಅದನ್ನ ನೋಡ್‌ತ್ತಿದ್ದ ನಂಗೆ ಯಾಕಪ್ಪ ಇಷ್ಟ್ ಸಣ್ಣ ಹೈದ ಒಬ್ಬನೆ ಬಂದುಟು. ನಿನ್ನ ಹೆಸರ್ ಎಂತ ಪುಟ್ಟ? ತೇಳಿ ಕೇಳ್‌ದೆ. ಆಗ ಆ ಪುಟ್ಟ ಹೈದ ಹೇಳ್‌ತ್ ನನ್ನ ಹೆಸರ್ ರಾಮು. ಪುನಃ ನಾನ್ ಕೇಳ್‌ದೆ ಯಾಕೆ ನಿಂಗೆ ಆ ಗೊಂಬೆ ಇಷ್ಟ. ದುಡ್ಡು ಕಮ್ಮಿ ಇದ್ದರೂ ಪುನಃ ಅದೆ ಗೊಂಬೆ ಬೇಕುತ ಹಠ ಮಾಡ್‌ತೊಳ.

ಆಗ ಆ ಹೈದ ಹೇಳ್‌ತ್ ನನ್ನ ತಂಗಿಗೆ ಗೊಂಬೆ ತೇಳ್‌ರೆ ತುಂಬಾ ಇಷ್ಟ. ನನ್ನ ತಂಗಿ ಈಗ ಇಲ್ಲೆ ಅವಳು ದೇವರತ್ರ ಹೋಗುಟು ನಾನ್ ನನ್ನ ಅಮ್ಮನ ಕೈಲಿ ಗೊಂಬೆ ಕೊಡಕು. ಅಮ್ಮಾ ಅದನ ತಕಂಡ್ ಹೋಗಿ ತಂಗಿಗೆ ಕೊಟ್ಟವೆ. ಅಮ್ಮ ಕೂಡ ಬೇಗ ತಂಗಿ ಹತ್ರ ಹೋದವೆತ ಅಪ್ಪ ಹೇಳ್‌ತ್ತಿದ್ದೊತ ಅವ ಹೇಳ್‌ತ್. ಈ ಪುಟ್ಟ ಹೈದನ ಮಾತ್ ಕೇಳಿ ಕಣ್ಣಲಿ ನೀರ್ ಬಾಕ ಸುರ್ ಆತ್. ಹೃದಯ ಭಾರ ಆಕೆ ಸುರ್ ಆತ್. ಆ ಹೈದಮಾತ್ ನಿಲ್‌ಸದೆ ಹೇಳ್‌ತ್. ನಾನ್ ಅಪ್ಪಂಗೆ ಹೇಳೊಳೆ ನಾನ್ ಸಂತೆಗೆ ಹೋಗಿ ಗೊಂಬೆ ತೆಕಂಡ್ ಬನ್ನೆ ಅಲ್ಲಿವರೆಗೂ ಅಮ್ಮನ ಹೋಕೆ ಬುಡ್‌ಬಡ ಲಾಯಿಕ ನೋಡಿಕ ತೇಳೊಳೆ ಹಂಗೆ ಅವ ಜೇಬಿಂದ ಒಂದ್ ಪೋಟೊನ ತೆಗ್‌ದ್ ತೋರ್‌ಸಿತ್ ಪೋಟೊ ಬಾಳ ಲಾಯಿಕಲಿ ಇತ್. ಇದನ ಕೂಡ ನನ್ನ ತಂಗಿಗೆ ಕೊಟ್ಟವೆ. ಆ ಪೋಟೋನ ನೋಡಿ ಅವಳು ಯಾಗೋಳು ನನ್ನ ಮರಿಯಕಾಗದ್. ಅಮ್ಮ ನಂಗೆ ತುಂಬಾ ಇಷ್ಟ. ನಾನ್ ಯಾಗೋಳು ಅವಳೊಟ್ಟಿಗೆ ಇರ್‌ಕೆ ಆಸೆಪಟ್ಟನೆ. ಅಮ್ಮ ನನ್ನ ಬಿಟ್ಟ್ ಹೋಕೆ ಆಗದ್ ತೇಳಿ ಆಸೆಟ್ಟನೆ. ಆದರೆ ನನ್ನ ಅಪ್ಪ ಹೇಳ್‌ದೊ ಅಲ್ಲಿ ನಿನ್ನ ತಂಗಿ ಒಬ್ಬಳೆ ಉಟ್ಟು ಅವಳನ್ನ ನೋಡಿಕಣೆಕೆ ಅಮ್ಮ ಹೋಕುತ ಅವ ಹೇಳ್‌ತ. ಆ ಪುಟ್ಟ ಹೈದನ ಮಾತ್‌ನ ಕೇಳಿ ತುಂಬಾ ಬೇಸರ ಆತ್.

ಪುಟ್ಟ ನಿನ್ನ ದುಡ್ಡು ಕೊಡು ಅದನ ನಾನ್ ಲೆಕ್ಕ ಮಾಡ್‌ನೆ ಅಂಗಡಿಯವ್ರಕೆ ಲೆಕ್ಕ ತಪ್ಪಿ ಹೋಗಿರ್‌ದುತ ನಾನ್ ಹೇಳ್‌ದೆ. ಎಲ್ಲಾ ದುಡ್ಡನ ಕೊಟ್ಟತ್ ಅದಕೆ ಸ್ವಲ್ಪ ದುಡ್ಡು ಸೇರ್‌ಸಿದೆ. ಈಗ ನೀನ್ ದುಡ್ಡುನ ಕೊಡುತೇಳ ಆ ಪುಟ್ಟ ಹೈದಂಗೆ ಹೇಳ್‌ದೆ. ಅವ ಆ ದುಡ್ಡುನ ಅಂಗಡಿಯವಂಗೆ ಕೊಟ್ಟತ್. ಆಗ ಅಂಗಡಿಯವ ಚಿಲ್ಲರೆ ಕೊಟ್ಟತ್. ಆ ಚಿಲ್ಲರಲಿ 2 ಬಿಳಿ ಬಣ್ಣದ ಗುಲಾಬಿ ಹೂವುಗಳನ್ನ ತಕಂಡ್‌ತ್. ಆಗ ನಾನ್ ಕೇಳ್‌ದೆ ಗುಲಾಬಿ ಹೂ ಯಾಕೆ ತಕ್ಕಂತೋಳತ. ಆಗ ಆ ಪುಟ್ಟ ಹೈದ ಹೇಳ್‌ತ್. ನನ್ನ ಅಮ್ಮಂಗೆ ಗುಲಾಬಿ ಹೂವು ತೇಳ್‌ದ್ರೆ ತುಂಬಾ ಇಷ್ಟ ಅದಿಕೆ ನಾನ್ ತಕಂಡೆತ.

ಮತ್ತೆ ನಾನ್ ಯೋಚನೆ ಮಾಡ್‌ಕನ ಗ್ಯಾನ ಆವ ಆಂದ್ ನಡ್‌ದ ರೋಡ್ ಆಕ್ಸಿಡೆಂಟ್. ಆ ಆಕ್ಸಿಡೆಂಟ್‌ಲಿ ನಿಂತ್‌ಕಂಡ್ ಇದ್ದ ಕಾರ್‌ಗೆ ಲಾರಿ ಬಂದ್ ಗುದ್ದಿತ್. ಮತ್ತೆ ನಾನ್ ನನ್ನ ಸ್ನೇಹಿತಂಗೆ ಪೋನ್ ಮಾಡಿ ಕೇಳ್‌ದೆ. ಅವನ ಊರದೆ ಆಗಿದ್ದೊ. ಅವ ಹೇಳ್‌ತ್ ಇಂದ್ ಹೊತ್ತಾರೆ ಹೆಂಗಸ್ ಸತ್ತ್ ಹೋತ್‌ತ. ಮತ್ತೆ ನಾನ್ ಸ್ನೇಹಿತಂಗೆ ಕಾಲ್ ಮಾಡಿ ಆ ಪುಟ್ಟ ಹೈದನ ಮನೆ ವಿಳಾಸ ತಕಂಡೆ. ಮತ್ತೆ ನಾನ್ ಅಲ್ಲಿಗೆ ಹೋದೆ. ಅಲ್ಲಿ ತುಂಬಾ ಜನ ಇದ್ದೊ. ಆ ಪುಟ್ಟ ಹೈದ ಕೂಡ ಅಲ್ಲೆ ಇತ್ತ್. ಅವ ಅಮ್ಮನ ಹತ್ತಿರನೆ ಕುದ್ದಿತ್. ಅವನ ಅಮ್ಮನ ಒಂದ್ ಕೈಲಿ ಬಿಳಿ ಬಣ್ಣದ ಗುಲಾಬಿ ಹೂ ಇತ್ತ್. ಇನ್ನೊಂದು ಕೈಲಿ ಅವ ನಂಗೆ ತೋರಿಸಿದ ಲಾಯಿಕದ ಪೋಟೊ ಇತ್ತ್. ಹಂಗೆ ಅವ ಸಂತೆಂದ ತಕಂಡ ಆ ಗೊಂಬೆ ಅಮ್ಮನ ಎದೆ ಮೇಲೆ ಇತ್ತ್. ಅದನ ನೋಡ್‌ಕನ ಮರ್‌ಡಿಕೆ ಬರ್‌ತಿತ್ತ್. ನನ್ನ ಮನಸ್ಸಿಗೆ ತಡಕಣೆಕಾಗದ ಬೇಜಾರ್ ಆತ್.

ಆಗ ನನ್ನ ಮನಸಿಗೆ ಆತ್ ಆ ಆಕ್ಸಿಡೆಂಟ್ ನಡಿಯದೆ ಹೋಗಿದ್ದರೆ, ಆ ಕುಟುಂಬಲಿ ಇಬ್ಬರ್ ಮಕ್ಕ ಅಮ್ಮನೊಟ್ಟಿಗೆ ಎಷ್ಟು ಲಾಯಿಕ ಇರ್‌ತ್ತಿದ್ದೊ. ಅಪ್ಪ, ಮಗ ಮತ್ತೆ ಮಗಳ ಬಗ್ಗೆ ಎಷ್ಟೆಲ್ಲಾ ಕನಸ್ ಕಂಡಿರ್‌ಬೊ ಹಿಂಗೆಲ್ಲಾ ಯೋಚನೆಗ

ಮನಸಿಗೆ ಆತ್. ಬಹುಶಃ ಈ ಕಥೆ ಬೇರೆ ಬೇರೆ ರೀತಿಲಿ ಅದೆಷ್ಟೊ ಜನರ ಬದ್‌ಕಲಿ ನಡ್‌ದಿರ್‌ದು. ಮಗ, ಮಗಳ್, ಗಂಡ, ಇಲ್ಲರೆ ಹೆಣ್ಣ್ ಮನೆಗೆ ಮುಟ್ಟುವರೆಗೆ ಕಾಯಿತಿದ್ದವೆ. ರೋಡ್‌ಲಿ ವೆಹಿಕಲ್ ಡ್ರೈವ್ ಮಾಡ್‌ಕನ ಜಾಗ್ರತೆಂದ ಇರೋಕು. ಹೆಲ್ಮೆಟ್ ಹಾಕಿ ನಿಯಮನ ಪಾಲಿಸಿ ತೇಳಿ ಪೊಲೀಸ್ ಅವು ಹೇಳಿವೆ. ಆದರೆ ನಾವು ಫೈನ್ ಕಟ್ಟಕಲಾ ತೇಳಿ ಅವರ ನಿಯಮನ ಪಾಲನೆ ಮಾಡ್‌ತೊಳೊ. ಆದರೆ ನಾವು ಮಾಡುವ ಒಂದ್ ತಪ್ಪ್ ನಮ್ಮ ಬದ್‌ಕ್‌ನ ಮಾತ್ರ ಅಲ್ಲದೆ ನಮ್ಮನ್ನ ನಂಬಿಕಂಡ್ ನಮ್ಮೆಲ್ಲರ ಪ್ರೀತಿ ಪಾತ್ರರಾಗಿರುವವರ ಬದ್‌ಕನ ಕೂಡ, ಅವರ ಕನಸ್ನ ಕೂಡ ಹಾಳ್ ಮಾಡಿವೆ.

ಇದನ ಮನಸಲಿ ಇಟ್ಟ್‌ಕಂಡ್ ಗಾಡಿ ಓಡ್‌ಸಿರೆ ಬಹುಶಃ ಎಲ್ಲೊ ಒಂದ್ ಕಡೆ ರಸ್ತೆಲಿ ಆಗುವ ಅಪಘಾತಗಳ ಸಂಖ್ಯೆ ಕಡಿಮೆಯಾದೆ.

ಜೀವ ಜೀವನ ತೇಳ್‌ದು ಒಮ್ಮೆ ಮಾತ್ರ ಸಿಕ್ಕುದು. ಆ ಒಮ್ಮೆ ಮಾತ್ರ ಸಿಕ್ಕಿದ ಜೀವನ ರಸ್ತೆಲಿ ಬಲಿಕೊಡ್‌ಬಡಿ. ಜೀವನನ ಬಹಳ ಜೋಪಾನ ಆಗಿ ಕಾಪಾಡಿಕಣಿ. ❑

---

## ಗಾಂದರ್ವ ಮೊದ್ವೆ

–ಕುಂಞೇಟಿ ಶಿವರಾಮ ಗೌಡ
ಕೊಲ್ಲಮೊಗ್ರ, ಸುಳ್ಯ

ಆನೆಗೂ ಆಡಿಗೂ ಆತ್ ಗಾಂದರ್ವ ಮೊದ್ವೆ
ಸಾಕ್ಷಿ ಆತ್ ಆ ಮೊದ್ವೆಗೆ ಅಲ್ಲಿದ್ದ ಗೋಳಿ ಮರವೆ

ಹೊಸ ದಂಪತಿಗ ಕಣ್ಣಿಗೆ ಬಿದ್ದೊ ಮರೆಲಿದ್ದ ಕರಿ ಕುರೆಗೆ
ಮನ್ಸಾತ್ ಮಾಡೊಕು ಒಂದು ತಮಾಸೆ ಕತ್ತಲೆಗೆ

ಇದ್ದೊ ಹೊಸ ದಂಪತಿಗ ತಿಂದುಂಡು ಬಾರಿ ಕುಸಿಲಿ
ಮದು ಚಂದ್ರಕೆ ಜಾಗೆ ಸಿಕ್ಕಿತ್ ಹೆಬ್ಬಲ್ಸ ಮರದ ಬುಡಲಿ

ಕುದ್ದುಟು ಒಂಟಿ ಕುರೆ ಮರದ ಗೆಲ್ಲ್‌ನ ಕೊಡಿಲಿ
ರುಚಿ ಹಣ್ಣ್‌ನಾ ತುಂಬಿಸಿದೆ ಕುರೆ ಅದರ ಕವುಳಿಲಿ

ಹೊಡ್ಡದೆ ಆನೆ ನಿದ್ದೆಲಿ ಬಾರಿ ಸಬ್ದದ ಗೊರ್ಕೆ
ಬಾತಿಲ್ಲೆ ನಿದ್ದೆ ಆಡಿಗೆ ಹೆದ್ರಿ ದೊಡ್ಡ ಸಬ್ದಕೆ

ಕುರೆ ಕರ್ತ್ ಬಾ, ಬೇಗ ಎದ್ ಮರದ ಬುಡಕೆ
ಸಿಹಿ ಸಿಹಿ ಹಣ್ಣ್ ಕೊಟ್ಟನೆ ಹೊಟ್ಟೆ ತುಂಬ ತಿಂಬಕೆ

ಆಸೆ ಆತ್ ಆಡಿಗೆ ಒಂಟಿ ಕುರೆನ ಪ್ರೀತಿ ಮಾತ್ ಕೇಳಿ
ಎದ್ದ್ ಹೊರ್ಬತ್ ಮಲ್ಗಿದ ಆನೆಗ ಹಸಿ ಸುಳ್ಳು ಹೇಳಿ

ಮೂಡ ಬುಡ್ಕನ ಆನೆ ಕಣ್ಣುಜ್ಜಿ ಎದ್ದ್ ಕುದ್ದದೆ
ಕಾಂಬೊದಿಲ್ಲೆ ನವವದು ಹೋದ್ದೆ ಹುಡ್ಕಿ ಮುಂದೆ

ಕಾಡ್ಲಿರ್ವ ಕುದ್ಕ ಸುದ್ದಿ ಮಾಡ್ತ್ ಹಾಕಿ ಬೊಬ್ಬೆ ಜೋರ್ಲಿ
ಗಂಡನ ಬುಟ್ಟು ಓಡಿ ಹೋಗುಟು ಆಡ್ ಕುರೆನ ಪ್ರೀತಿಲಿ ❑

# ಹೆತ್ತವು



-ಬೈಲೇರಾ ಭಾನು ಅಶೋಕ್
ಬಿಳಿಗೇರಿ ಗ್ರಾಮ

ಅಪ್ಪ ಅವ್ವತೇಳವು ನಮಿಗೆ
ಪ್ರತ್ಯೇಕ್ಷ ದೇವರ್
ನಮ್ಮ ಬದ್‌ಕ್ ರೂಪಿಸಿಕೆ ಸುರಿಸಿವೆ
ಅವೆಷ್ಟೋ ಬೇವ್‌ರ್

ಹಗಲ್ ರಾತ್ರಿ ಕಷ್ಟ ಪಟ್ಟ್
ಇರುವ ಬಡತನನೇ ಇಷ್ಟ್‌ಪಟ್ಟ್
ನಮ್ಮ ಹೊಟ್ಟೆ ತುಂಬಿಸಿದೋ ಇದ್ದದರ್ನ
ಹಂಚಿ ಕೊಟ್ಟ್

ಅಂದ್ ಹೇಳ್ದ ಒಂದೊಂದು ಬುದ್ದಿಮಾತ್
ಇಂದ್ ನಮ್ಮ ಬದ್‌ಕಿಗೊಂದು ದಾರಿ ಆತ್
ಎಲ್ಲಿಯಾದರ್ ಇತ್ತ್‌ತೇಳ್ರೆ ಓಟದ ಪೈಪೋಟಿ
ಅವ್ವ ಹೇಳ್ದು ಓಡು ಮಂಜ ಯಾರು ಇಲ್ಲೆ ನಿಂಗೆ ಸರಿಸಾಟಿ

ಆದೆ ಇಲ್ಲೆತೇಳ್ದು ನಿಂಗೆ ಬ್ಯಾಡ ಮನ್ಸ್‌ಲೊಂದು ಹೆದ್‌ರಿಕೆ
ಇಳ್ದಮ್ಯಾಲೆ ಬ್ಯಾಡನೋಡು ಕೆಸರ್ ದೊಳ್‌ನ ಅಂಜಿಕೆ
ಸೋಲುತೇಳ್ದು ಪಾಠ ನಿಂಗೆ ಮುಂದೆ ತಿದ್ದಿನಡಿಯಕೆ.
ಮುಂದೆ ಮುಂದೆ ಓಡ್ದೊತೇಳಿ ನಿಲ್ಲ್‌ಬ್ಯಾಡ ಅರ್ಧಕೆ

ಬೊತ್ತ್‌ನೀನ್ ಯಾಗೋಳ್ ತಿರುಗಿ ನೋಡಿಕೆ
ನಿನ್ನ ಗುರಿ ಮುಂದೆ ಇರ್ಲಿ ನಿಕ್‌ಮಾಡ್ದ ಜಾಗಕೆ.
ಇಂದ್ ಸಿಕ್ಕದಿರ್ದು ನಿಂಗೆ ಇನಾಮು ತೇಳೊ ಜಯ
ಮುಂದೆ ಉಟ್ಟೇ ಉಟ್ಟು ನಿಂಗೆ ಗೆಲುವುತೇಳೊ ವಿಜಯ.

ಈ ಮಾತ್ ಅಲ್ಲಾನಿಂಗೆ ಬರೀ ಒಂದು ದಿನಾ
ಇದರಿಂದ ಆಕು ನಿನ್ನ ಇಡೀ ಜೀವನಾ
ಅರ್ಥ ಮಾಡಿಕಣದ ಮಕ್ಕ ನಾವು ಅಪ್ಪ ಅವ್ವನಾ
ದೂರ ಮಾಡಿ ಕಳ್ಕಂಡವೆ ಅವರ ಪ್ರೀತಿ ಸ್ನೇಹನಾ

ಕಳ್ಕಂಡವ್ಕೆ ಗೊತ್ತು ಏನಂತ ಅದರ ನೋವು
ಮನೇಲಿ ಮಾತ್ರ ಬೇಕು ಬೇಕು ಎಂದೂ ಹಿರಿಯವೂ

# ಬಾಲ್ಯದ ಬೊದ್ಕ್‌ನ ನೆಂಪು

-ಕಣಜಾಲ್ ಪೂವಯ್ಯ
ಚೆಟ್ಟಳ್ಳಿ

1959ನೇ ಇಸ್ವಿ ಕಾರ್ತಿಂಗ-ಅದ್ ಹಸ್‌ಕೂಸ್. ನಂಗೆ ಎರ್‌ಡ್‌ವೊರೆ ಅಣ್ಣಂಗ ಐದ್‌ವೊರ್ಷ. ಜಾಂಪ-ಜಾಮವ್ವ ಅಂದರೆ ಅವ್ವ (ಅಮ್ಮನ)ನ ಅಪ್ಪ-ಅಮ್ಮ ಇದಿಷ್ಟ್ ನಮ್ಮ ಸಂಸಾರ ಆಗಿತ್ತ್. ಅಪ್ಪ ಅಂದ್‌ನ ಕಾಲಲಿ ಕನ್ನಡ್ ಜಿಲ್ಲೆಂದ ಕೊಡ್‌ಗ್‌ಗೆ ಒಬ್ಬನೇ ಬಂದಿದ್ದೊ.

ನಾ ಹೇಳಿಕೆ ಹೊರ್ಟ್‌ದ್ ನನ್ನ ಬಾಲ್ಯದ ಸಣ್ಣ ವಿಷ್ಯ ಮಾತ್ರ ಇಡೀ ನನ್ನ ಜೀವನ ಕಥೆ ಕೇಳ್ರೆ, ನೀವುಗ ಸನ ವ್ಯಥೆಂದ ಹೊರಗೆ ಬಾಕಿಲೆ....

ಅವ್ವ (ಅಮ್ಮ) ತಂಗೆ ಕೂಸುನ ಹೆತ್ತ್ ಸೊಯಿ ಇಲ್ಲದೆ ಮಲ್‌ಗಿಟ್ಟು. ಬಾಂತ್ಗೆ ಅದೆಂತದೋ ಚೆನ್ನಿ (ಸನ್ನಿ) ಮೀರ್‌ದಗಡ. ಅವ್ವ ಸತ್ತೆ ಹೋವುಟು. ಇಪ್ಪತ್ತೆರ್ಡ್ ವೊರ್ಷಲಿ ಎಲ್ಲಾ ಮುಗ್ಸಿಕಂಡ್ತ್ ಆ ನನ್ನ ಹೆತ್ತವ್ವ...!!!

ಪದ್ಧತಿ ಪ್ರಕಾರ ನೆರೆಕರೆ ಇದ್ದೊವು ಬಂದ್ ಸೇರ್ದೊ. ಹೆಣನ ಎರ್ಡ್ ಕಲ್ಲ್‌ಮೇಲೆ ಒಂದ್ ಮರದ ಪಾರ್ ಮಡ್‌ಗಿ. ಅದರ ಮೇಲೆ ಮಲ್‌ಗಿಸಿಯೊಳೊ. ಎರ್ಡ್ ಮೂರ್ ಹೆಣ್ಮಕ್ಕ ಹೆಣ ಮೀಸ್‌ತೊಳೊ. ಅದ್ಧ ಒಡ್ಡ ಸೀರೆ ಸೆರಲಿ ನಾನ್ ಇಣ್ಕಿ ನೋಡಿ. ಇವೆಲ್ಲಾ ಸೇರ್ಕಂಡ್ ಅವ್ವನ ಎಂತಕೆ ಮೀಸ್‌ತೊಳೋಂತ ಗೇನ ಮಾಡ್ದೆ. ಅವ್ವ ಮಾತ್ರ ಮಿಸ್ಕತ್‌ಲ್ಲೆ. ನೆಗಾಡ್‌ತ್‌ಲ್ಲೆ. ನಮಿಗೆ ಬಯ್ತ್ನನ ಇಲ್ಲೆ! ನಾನ್ ಗೇನ ಮಾಡ್ಕಂಡೇ ಆತ್. ಬಂದ ಜನ ಅತ್ತಿತ್ತ ಓಡಾಡ್‌ಕಂಡ್ ಚಾಪೆಲಿ ಮಲ್ಗಿಸಿದ ಅವ್ವಂಗೆ ಎಂತೆಂತದೊ ಸಿಂಗಾರ ಮಾಡ್ತಿದ್ದೊ. ನಮ್ಮ ಜಾಂಪ-ಜಾಮವ್ವ ಮಾತ್ರ ಹಸ್ ಕೂಸ್ ತಂಗೆನ ಕೈಲಿ ಹಿಡ್ಕಂಡ್ ನನ್ನನ ಸೊಂಟಲಿ ತೆತ್ತಿಕಂಡ್ ಅಣ್ಣನ ಕಾಲ್‌ಬುಡಲಿ ನಿಲ್ಸಿಕಂಡ್ ಜೋರಾಗಿ ಮರ್ಗ್‌ತೊಳೊ.

ವಯಸ್ಸಾದ ಜಾಮವ್ವಂಗೆ ನನ್ನ ತೆತ್ತಿಕಂಬಕೆ ಆತ್‌ಲೆ ದೊಪ್ಪತ ಕೆಳ್‌ಗೆ ಇಳ್ಸಿತ್. ಐದ್ ವೊರ್ಷದ ನನ್ನಣ್ಣ ನನ್ನ ತಬ್ಬಿ ತೆತ್ತಿಕಂಬಕೆ ಬಾತ್. ಎರ್ಡ್‌ವೊರೆ ವೊರ್ಷದ ನಾನ್ ಅವ್ವ ಇದ್ದಲ್ಲಿಗೆ ಹೋಗಿ ಅವ್ವಾ ನನ್ನಾ ತೆತ್ತಿಕಂತೇಳಿ ಮರ್ಗಿಕೆ ಸುರು ಮಾಡ್ದೆ. ಅಣ್ಣನೂ ಮರ್ಗ್‌ತುಟ್ಟು ನಮ್ಮನ ಸಂವ್‌ಧಾನ ಮಾಡ್ಕೆ ಜಾಮವ್ವ ತಂಗೆನ ತೆತ್ತಿಕ್ಂಡ್ ಹತ್ರ ಕುದ್ರಿಸ್‌ಕ್ಂಡೊ. ಒಟ್ಟಿಗೆ ಮತ್ತ್ಯಾರೋ ಮೂರ್ನಾಕ್ ಹೆಣ್ಮಕ್ಕ ಇದ್ದೊ. ಜಾಮವ್ವನೋ ಹುಟ್ಟು ಕಿವುಡಿ. ತಂಗೆ ಬಾಪೆನ ನೋಡಿ ನಾನ್ ಗಪ್ ಚುಪ್ ಕುದ್ದೆ.

ಇಷ್ಟಾಕನ ಅವ್ವನ ಹೆಣನ ಎರ್ಡ್ ಬೆದ್ರ್ ಬಡ್ಗಲಿ ಕಟ್ಟಿ ಹೆಗ್ಲ್‌ಮೇಲೆ ಹೊತ್ಕಂಡ್ ಕಾಡೊಳಗ ನಡ್ದ್ ಹೋದೊ. ನನ್ನ ತೆತ್ತಿಕಂಡ್. ಅಣ್ಣನ ನಡ್ಸಿಕ್ಂಡ್ ಅದ್ಯಾರೂ ಅಜ್ಜಿ ಹಿಂದೆ ಹಿಂದೆ ಹೋತಿದ್ದೊ. ನಾನ್ ಮಾತ್ರ ನನ್ನ ತೊಪ್ಲ್ ಸುಡಿಲಿ ಅವ್ವನ ಎಲ್ಲಿಗೆ ತಕೊಂಡೋದವೆ. ಅವ್ವಾ ನಾ... ನಿನ್ನೊಟ್ಟಿಗೆ ಬನ್ನೆತಾ ಮರ್ಗ್‌ತೊಳೆ.

ಸೊಲ್ಪದೂರಲಿ. ಕಾಡ್ ಬಲ್ಲೆನ ಎಲ್ಲಾ ಕಡ್ದ್. ಸೊವುದೆ ಒಟ್ಟಿಯೊಳೊ. ಸೊವ್ದೆ ಮೇಲೆ ಅವ್ವನ ಮಲ್ಗಿಸಿದೊ. ಯಾರೋ ಒಬ್ಬ ನನ್ನನ ತೆತ್ತಿಕಂಡ್ ಕೈಲಿ ಕಿಚ್ಚನ ಸೂಡಿ ಹಿಡ್ಕಂಡ್ ಸುತ್ತುಬಾತ್. ಮುಂದೆದರ ನಿಮಿಗೇ ಗೊತ್ತುಟಲಾ...

ಚೂಟುಕಳಕ್ಕೆ ಹೋದೊವು ವಾಪಾಸ್ ಬಂದ್ ಅವರವರ ಮನೆಗೆ ಹೋದೊ. ಮುಂದೆದ್ ಆ ದೇವ್ರಿಗೆ ಪ್ರೀತಿ....!

ತಂಗೆ ಕೂಸು ಹಾಂಗೆ ಹೀಂಗೇತಾ ನರ್ಕ ಬಂದ್‌ಕ್ಂಡ್ ಹತ್ತ್‌ತಿಂಗ ಬೊದ್ಕಿತ್ ಮತ್ತೆ ಅವಳ್ಳ ಸನ ಅವ್ವ ತನ್ನ ಮಡಿಲಿಗೆ ಸೇರ್ಸಿಕಣ್ತ್ ಅದ್ ಬಳ್ಳದೇ ಆತ್ ಬುಡಿ. ಯಾಕೇಂತೇಳ್ರೆ ಗಂಡ್ ಮಕ್ಕ ಹೆಂಗಾರ್ ಬೊದ್ಕುವೊ. ಅವ್ವ ಇಲ್ಲದ ಹೆಣ್ಣ್‌ಮಕ್ಕ ಬೇರೆ ಅವ್ವನೊಟ್ಟಿಗೆ ಹೇಂಗೆ ಬೊದ್ಕುದು?

ಮುಂದೆ ಹಾಂಗೇ ಆತ್. ನಂಗೆ ಐದ್ ವೊರ್ಷಾಕನ ಅಪ್ಪ ನಮ್ಮನ ನೋಡಿಕಂಬಕೆತ್ತೇಳಿ ದೊಡ್ಡವ್ವಾಂತೇಳ್ರೆ ಅವ್ವನ ಕೂಡೋಳಿ ಅದೊ. ಅಷ್ಟಾಕನ ನಮ್ಮೊವ್ವಾಂತೇಳಿ ಇದ್ದ ಒಬ್ಬ ಜಾಮವ್ವ ಸನ ತೀರಿಕೊಂಡೊ.

ಮತ್ತೆ ನೀವುಗ ತಿಳ್ದೊವು! ನಿಮಿಗೆ ಹೆಚ್ಚಿಗೆ ಹೇಳೊಕುಂತಿಲ್ಲೆ. ದೊಡ್ಡವ್ವನೊಟ್ಟಿಗೆ ನಾನ್ ನನ್ನಣ್ಣ ಹೇಂಗೆ ಬೊದ್ಕಿರುವೋತಾ ನೀವೇ ಊಹಿಸಿಕ್‌ಣಿ ಬಲಾ....

ಮಕ್ಕಳ ವಯಸ್ಸ್‌ಲಿ ನಾವು ಅವ್ವನ ನೆಪ್ಪಿಕಂಡ್ ಕಣ್ಣೀರ್‌ತೇಳ್ವ ಬುನೀರ್‌ಲೇ ಮನ್ನಳಿ ಬೆಳ್ದಿದ್ದೊ. ಅಂಥ ಬೊದ್ಕ್‌ನ ಆ ದೇವ್ರು ಯಾರಿಗೂಕೊಡದಿರ್ಲಿತಾ ನಾನ್ ಬೇಡಿಕಣ್ತೊಳೆ.

# ಮೊಹಿಮೆ



– ಸಂಜೀವ ಕುದ್ಪಾಜೆ

ಅತ್ತೆ ಬೊಗ್ಗಿದ್ ಪಿಳಿಪಿಳಿ
ಕಣ್ ಬೊಡುವ ಕೂಸುನ
ಎತ್ತಿಕೆ ಆಕನ ಸೊಸೆ ಹೇಳ್ತ್
ಅತ್ತೆ ಕೈಗೆ ಡೇಟಲ್ ಹಾಕಣಿ
ನರವುಳ್ ಕಾಯಿ ಹೆಕ್ಕಿಕೆ
ಹೋಕನ ಮಂಞ ಹೇಳ್ತ್
ಅಪ್ಪ ಬೇಡ
ನಾವು ಡಾಲರ್ ಹೆಕ್ಕಮ
ಬೆಂಡದ್ ನೀರ್‌ನಾಂಗೆ ಇದ್ದ
ಕೆರೆ ನೀರ್‌ನ ಕಂಡದ್
ಕುಡಿಂತ್ ಮಾವ ಹೇಳ್‌ಕನ
ಅಳಿಯ ಹೇಳ್ತ್ ಬಾಟ್ಲಿನೀರ್ ಕುಡಿಯಮೊಂತ
ನಂಗೆ ಗೊತ್ತುಟು ನೀವ್ಗೆ ಗೊತ್ತುಟ
ಒಟ್ಟೆ ಚೆಪ್ಪಿಲಿ ರೆಂಜಾಳ ಹೂ ಹೆಕ್ಕಿ
ಮಾಲೆ ಚುರ್‍ದ್ ದೇವ್ರ ಪಟಕೆ ಹಾಕಿದ್
ಒಟ್ಟೆ ಚೆಡ್ಡೆಲಿ ಶಾಲೆಗೆ ಹೋದ್
ನಾ ಹೇಳ್ದುಲೆ
ಹೇಳ್ರೆ ಹೆಚ್ಚಾಗಾದೆ
ನೀವು ಕೇಳ್ದುಲೇಂತ
ನಾ ಹೇಳ್ದುಲೆ ಅಣ್ಣಾ
ಕತೇನೆ ಹಂಗೆ
ಹೇಳ್ತೋ ಆಕಿಲೆ
ಹೇಳದಿದ್ದರೆ ಅದುನೂ ಆಕಿಲೆ
ನೀವೆಲ್ಲ ಕೋಣಿಕನ
ನಾ ಎರ್‍ಡ್ ಹೆಜ್ಜೆ ತೆಗ್ದೆ ಆದೆನ
ನನ್ನ ಕಾಲ್‌ಲಿ ಆನಿ ಉಟ್ಟು
ನನ್ನ ತಲೆ ಅದ್‌ರ್‌ದೆ
ಸೊಂಟ ಬಲ ಇಲ್ಲೆ
ನಾಯಾಗ ಬಿದ್ದನೆ ನಂಗೆ
ಗೊತ್ತಿಲೆ ಅಣ್ಣಾ?

ನೀವು ಕುಣಿದರ ನೋಡಿ
ನಾ ಕೊಣಿತಾ ಒಳೆ!

❑

# ಕೊಡ್ಗ್‌ನಾಡ್



–ಪಟ್ಟಡ ಪ್ರಭಾಕರ
ಅವಂದೂರು

ಬನ್ನಿ ಬನ್ನಿ ಕೊಡ್ಗ್‌ನಾ ವೀರಮಕ್ಕಳೇ॥
ಕೊಡ್ಗ್‌ನಾ ಏಳ್ಗೆಗಾಗಿ ತನುಮನನಾ ಅರ್ಪ್‌ಸೊನಾ॥
ಕೊಡ್ಗ್‌ನಾಡ್‌ಲೇ ಜಯಭೇರಿ ಮೊಳ್ಗ್‌ಸೊನಾ॥
ಕಾವೇರಮ್ಮನ ಪಾದಸೇವೆ ಬೇಕುತೇಳಿ ಬೇಡೊನಾ॥

ಕೊಡ್ಗ್‌ನಾ ಹಿರಿಮೆನ ದಸದಿಕ್ಕಿಗೂ ಹಬ್ಬುಸೊನಾ॥
ಕೊಡ್ಗ್‌ನಾ ಅರೆಗನ್ನಡ ಬಾಸೆ ಕಸ್ತೂರಿನಂಗೆ॥
ಕೊಡ್ಗ್‌ನಾ ನಾಡಿದ್ ನಂದನ ಬನದಂಗೆ॥
ಕೊಡ್ಗ್‌ನವರ ಹೃದಯಲಿ। ಕರುಣೆ ಬಾರಿ ಉಟ್ಟುಗಡಾ

ಕೊಡ್ಗ್‌ನಾ ನಾಡ್ ಇದ್। ವನಸಿರಿನ ತೌರುಗಡಾ...।
ಹಾಲೇರಿ ವಂಸದಾ ಜಂಗಮಾ। ಮುದ್ದುರಾಜ ದೊರೆಯಾದೊ
ಕೊಡ್ಗ್‌ನಾಡ್‌ನ ಏಕತೆಗೆ ಮೂಲಕಾರಣತಾದೊ॥
ದೊಡ್ಡ ವೀರಪ್ಪಾ, ವೀರರಾಜೇಂದ್ರ, ಲಿಂಗರಾಜ ಒಡೆಯರ್।

ಕೊಡ್ಗ್‌ನಾಡ್‌ನ ರಕ್ಷಣೆಗೆ ಎದೆ ತಟ್ಟಿ ನಿತ್ತೊ ಅವು॥
ಗುಡ್ಡೆಮನೆ ಅಪ್ಪಯ್ಯ ಗೌಡ ಕೆದಂಬಾಡಿ ರಾಮಯ್ಯ ಗೌಡ
ಚೆಟ್ಟಿ ಕುಡಿಯ ಕರ್ತು ಕುಡಿಯ। ಹೋರಾಡ್ದ ನಾಡ್ ಇದ್....॥
ಆಂಗ್ಲ ಸಾಮ್ರಾಜ್ಯನ ಬೀಳ್ಸುವ ಕನ್ಸ್‌ಕಂಡೊ ಕ್ರಾಂತಿಕಾರರ್॥

ಸಿಂಹ ಸ್ವಪ್ನದಂಗೆ ಅವು ವೀರಸ್ವರ್ಗ ಪಡ್ದೊ ॥ಬನ್ನಿ॥
ಉಂಬಳಿ ಜಮ್ಮ ಭೂಮಿ ಹಾಲೇರಿ ರಾಜರ್ ಕೊಟ್ಟೊ
ಕೊಟ್ಟ ಭೂಮಿ ಪರಮಾನ್ನ ತೇಳಿ ಗೌಡ್ರ್ ತಿಳ್ದೊ.
ಸ್ವಂತಿಕೆಗೆ ತನುಮನಾ ಅರ್ಪಿಸಿದೊ ಇವು ಕಷ್ಟಪಟ್ಟ್ ದುಡ್ದೊ॥

ಮೆರ್‍ದೊ ಜೆನ ದೇಸೇವೆ ಮಾಡ್‌ತಿದ್ದೊವು
ಧೀರ ವೀರ ಸೇನಾನಿ। ತಿಮ್ಮಯ್ಯ ಕಾರ್ಯಪ್ಪ
ಕೀರ್ತಿ ತಂದೊ ನಮ್ಮ ನಾಡ್‌ಗೆ ಕೊಡ್ಗ್‌ನಾಡ್‌ಗೆ । ಕೊಡ್ಗ್‌ನಾಡ್‌ಗೆ
ಬನ್ನಿ ಬನ್ನಿ ಕೊಡ್ಗ್‌ನಾ ವೀರಮಕ್ಕಳೇ॥

❑

# ಅದ್ವೈತ



– ಲೀಲಾ ದಾಮೋದರ
9449451051

ನೊಡುಲಿ ಹಳ್ಳ ಹರಿಯುತಿತ್ತ್ ಸಮುದ್ರದಾಂಗೆ
ದಂಡೆಗೆ ಎರ್‌ಡ್ ಬಿಮ್ಮನೆ ಒದ್‌ಕಂಡ್ ಇದ್ದೊ
ಗುರ್ತನೇ ಇಲ್ಲದವರ ಹಾಂಗೆ
ಮಾತ್ ಇಲ್ಲೆ, ಕತೆ ಇಲ್ಲೆ ಹೆಚ್ಚ್ ಯಾಕೆ
ಹಳ್ಳದ ಆಚೆ, ದಂಡೆ ಒಂದು ಉಟ್ಟುತೇಳ್ದು
ಈಚೆ ದಂಡೆಗೆ ಗೊತ್ತೇ ಇಲ್ಲೆ
ಗೊತ್ತು ಮಾಡಿಕಂಬ ಅಗತ್ಯನೂ ಇತ್‌ಲೆ ಬುಡಿ
ಕಾಲಕಾಲಕ್ಕೆ ಮಳೆ ಆತಿತ್ತ್
ಧಾರಾಳ ನೀರ್, ದಟ್ಟ ಕಾಡ್, ಸುಳಿವ ಗಾಳಿ, ತಂಪೋ ತಂಪು
ಮತ್ತೆ ಯಾಕೆ ಬೇರೆವರ ಉಸಾಬರಿ
ತಮ್ಮಷ್ಟಕ್ಕೇ ಅವು ಸುಖಿಗ
ಕಾರ್ಪಣ್ಯ ಗೊತ್ತಿಲ್ಲದ ಜೀವನ್ಮುಖಿಗ } 2
ಯಾಕೋ ಇತ್ತೀಚೆಗೆ ಹಳ್ಳಲಿ ನೀರ್ ಕಮ್ಮಿ ಆಗುಟು
ಈಚೆ ದಂಡೆಗೆ ಆಚೆ ದಂಡೆ ಕಂಡದೆ
ಮೆಲ್ಲನೆ ನೆಗಾಡ್ತ್ ಈ ದಂಡೆ, ಕೈ ಬೀಸಿತ್ ಆ ದಂಡೆ } 2
ಈ ಸರ್ತಿ ಅದೇನ್ ತಡಿಯಕಾಗದ ಸೆಕೆ
ಒಂದು ಕಡ್ಡಿ ಗೀರಿರೆ ಸಾಕ್ ಇಡೀ ಭೂಮಿನೇ ಹೊತ್ತಿ
ಬೂದಿ ಆದೋ ಏನೋ !
ಅಷ್ಟೆ ಧಗೆ, ಅಷ್ಟೆ ಬೇಗೆ, ಅಷ್ಟ್ ಉರಿ !!
ಬಿಗುಮಾನ ಬುಟ್ಟು, ಸಮ್ಮಾನ ಪಟ್ಟ್ } 2
ಸುಖ ದುಃಖ ಮಾತಾಡಿಕಂಡೊ
ದುಮ್ಮಾನ ಕಮ್ಮಿ ಮಾಡಿಕಂಡೊ
ಈ ಹಳ್ಳಲಿ ನೀರ್ ಹರ್‌ದು ಪೂರ ನಿತ್ತುಟು } 2
ಅಲ್ಲಿ ಇಲ್ಲಿ ಹೊಂಡಲಿ ಕಂಡದೆ
ಅಷ್ಟೋ ಇಷ್ಟೋ ನೀರ್, ಕಣ್ಣೀರೆನ ಹಾಂಗೆ
ಈ ದಂಡೆ ಆ ದಂಡೆ ಕಡೆಗೆ ನೋಡ್ತ್
ಆ ದಂಡೆನು ಈ ಕಡೆಗೆ
ಒಮ್ಮೆಗೇ ಎರ್‌ಡೂ ದಂಡೆಗೆ ಹೊಳ್‌ತ್
ತಾವೂ ಇಬ್ಬೊರೂ ಬೇರೆ ಬೇರೆ ಅಲ್ಲ
ತಮ್ಮ ನೊಡುಲಿ ಹಳ್ಳ ದಾರಿ ಮಾಡಿಕಂಡ್ } 2
ಹರ್ದುಟು ಅಷ್ಟೆ.
ಅಚ್ಚರಿ ಅವುಕೆ !
ಈ ಅದ್ವೈತದ ಅರಿವಾಕೊರೆ
ಹಳ್ಳನೇ ಆರಿ ಹೋಕಾತಾ.....!?
ಮತ್ತೆ ಮಳೆ ಬಂದುಟು
ಹಳ್ಳ ತುಂಬಿ ಹರ್ಕಂಡುಟ್ಟು } 2
ಈಚೆ ದಂಡೆಗೆ ಆಚೆ ದಂಡೆ ಕಾಂಬೊದ್ಲೆ
ಆಚೆ ದಂಡೆಗೆ ಈ ದಂಡೆನೊಟ್ಟಿಗೆ ಮಾತಾಡಿಕೂ ಆದ್‌ಲೆ
ಆದೊರೂ, ತಾವು ಇಬ್ಬರೂ ಒಂದೇ ತೇಳುವ } 2
ನೆಮ್ಮದಿನ ಭಾವ ಈಗ ದಂಡೆಗಳಿಗೆ ❑

# ನಮ್ಮೂರು ತೌರೂರು

– ಎಸ್. ಆರ್. ಯಶೋದಮ್ಮ
ಸಿದ್ದೇಶ್ವರ ಲೇಔಟ್
ಸಿಡೇವಹಳ್ಳಿ, ನಾಗಸಂದ್ರ

ಭಾರತದ ದಕ್ಷಿಣ ಕಾಶ್ಮೀರ ಕೊಡಗು
ಕಾವೇರಿ ಉಗಮದ ಬ್ರಹ್ಮಗಿರಿ ಮೆರಗ್

ವೀಕ್ಷಕರ ಕರ್ದದೆ ಕೊಡ್ಗಿನಾ ಬೆಡಗ್
ಪ್ರಖ್ಯಾತ ಪ್ರೇಕ್ಷಣೆಯ ಧಾಮಗಳ ಬೆರಗ್

ನಾಗರಹೊಳೆ ನಿತ್ಯ ಹರಿದ್ವರ್ಣವನನು
ಬಿಸ್‌ಲನ್ನೇ ಕಾಣದ ಕತ್ತಲೆಯ ಬನನು

ತಣ್ಣೀರ ಹಳ್ಳಗಳ ನೀರ್ಲ್ಲೊಲ್ಲಿ ಝರಿ ತೊರೆಗ
ಅಬ್ಬಿ-ಇರ್ಪುಗಳಂತ: ಹತ್ತಾರ್ ಜಲಪಾತ

ಪಾವಿತ್ರ್ಯ ಕಾವೇರಿ; ಹಟ್ಟಿಹೊಳೆ ಕಕ್ಕೆಹೊಳೆ
ಲಕ್ಷ್ಮಣತೀರ್ಥ ಹೊಳೆ ಹುಟ್ಟಿದವು ಕೊಡಗಲ್ಲೆ

ಹಣದ ಬೆಳೆ ಯಾಲಕ್ಕಿ, ಮೆಣ್ಸ್, ಕಿತ್ತಳೆ ಕಾಫಿ
ಹಣದ ಹೊಳೆ ಹರ್ದದೆ ನೀರಿನಾಶ್ರಯಕೆ

ಕೊಡಗಿನವು ನಾವುಂತ ಹೇಳೊಕೊಂಬುದು ಅಷ್ಟೆ
ಬರಡ್ ಭೂಮಿಯ ನಮ್ಮ ಹಣೆಬರಹ ಇಷ್ಟೇ

ಯಾಕಮ್ಮ ಜಲದೇವಿ ನಮ್ಮ ಕೈ ಬಿಟ್ಟೆ
ಯಾವ ತಪ್ಪಿಗೆ ನಾವ್ಗೆ ಈ ಶಿಕ್ಷೆ ಕೊಟ್ಟೆ

ಒಂದ್ ಕಣ್ಣ್‌ಗೆ ಬೆಣ್ಣೆ; ಒಂದ್ ಕಣ್ಣ್‌ಗೆ ಸುಣ್ಣ
ಎಂಬ ಗಾದೆಯ ಪಾಡ್ ನಮ್ಮದಾತ್

ಹಾರಂಗಿ ಜಲಾಶಯ ಕೂಗಳತೆಲಿದ್ದರೂ
ಹತ್ತಿರದ ಗೇರೂರು ಜಲಾಶಯ ತುಂಬಿದರೂ

ಕೊಡಗಲ್ಲೇ ಹುಟ್ಟಿದ್ದ ಹೊಳೆಗೆಲ್ಲೋ ಹರಿದೋದೊ
ಸುತ್ತಮುತ್ತ್ಲ ನೀರ್ ನಮಗೇನೂ ಸಿಗದಾದೊ

ಬರಗಾಲ ಹೆಸರಾದ ನಮ್ಮೂರ ಜನರನ್ನ
ಸರಸ್ವತಿಯೆ ಕೈಹಿಡಿದ್ ಮುನ್ನಡೆಸ್ ನಮ್ಮ

ನಮ್ಮೂರ ನೆಲ ಚೆನ್ನ; ಬೆಳ್ದದೆಲ್ಲವು ಚಿನ್ನ
ನಮ್ಮ ಭಾಷೆಯೇ ನಾವುಗೆ ದ್ರವ್ಯ ರತ್ನ ❑

# ಕೊಡಗ್‌ನ ಗೌಡರ್



-ಕಟ್ರತನ ಲಲಿತಾ ಅಯ್ಯಣ್ಣ
ಗೌಳಿಬೀದಿ, ಮಡಿಕೇರಿ

ಗೌಡರ್ ನಾವ್ ಗೌಡರ್
ಹೆಮ್ಮೆನ ಕೊಡಗ್‌ನ ಗೌಡರ್॥
ನಮ್ಮದ್ ಹತ್ತ್ ಕುಟುಂಬಗ
ನಮಗುಟ್ಟು ಹದಿನೆಂಟ್ ಗೋತ್ರಗ॥
ಕೊಡಗ್‌ಲಿ ಇರ್‍ವ ಗೌಡ ಕುಟುಂಬಗ
ಇವ್ಕೆ ಉಟ್ಟು ಪೊರ್ಲುನ ಹೆಸರ್‌ಗ ॥
ನಮ್ಮದ್ ಪದ್ಧತಿ ಆಚಾರ ವಿಚಾರ ಅಪಾರ
ನಮ್ಮಲ್ಲಿಟ್ಟು ಸೋಬಾನೆ ಹಾಡ್‌ಗಳ ಭಂಡಾರ॥
ಹೆಣ್ಮಕ್ಕ ಉಟ್ಟವೆ ಸೀರೆ ಮುಂದೆ ನೆರಿಇಟ್ಟ್ ಗೇಂಟಿಕಟ್ಟಿ
ಗಂಡ್ಮಕ್ಕ ತೊಟ್ಟವೆ ಪೇಟ, ಬಿಳಿ ಕುಪ್ಪಸ ದಟ್ಟಿ॥
ಕೆಳದಿ ನಾಯಕರ ಕಾಲಲಿ ಇದ್ದೊಳೊ ನಾವ್
ಹಾಲೇರಿ ಅರಸರ ಕಾಲಲಿ ಇದ್ದವು ನಾವ್॥
ಅಂದ್ ರಾಜರ ಕಾಲದಿ ಮಾಡ್ಯೊಳೊ ಹಲವ್ ಸೇವೆಗ
ರಾಜ ಮೆಚ್ಚಿ ಕೊಟ್ಟುಟ್ಟು ಜಮ್ಮ-ಉಂಬಳೆ ಆಸ್ತಿಗ॥
ರಾಜನ ಸೇನೆಲಿ ವೀರತನಲಿ ದುಡ್ದೊಳೊ
ಗುರುತಾಗಿ ಬಾಲ್‌ಕತ್ತಿ, ಒಡಿಕತ್ತಿ ಪಡ್ದೊಳೊ॥
ಬ್ರಿಟಿಷರ ಕಾಲಲಿ ಗುಡ್ಡೆಮನೆ ಅಪ್ಪಯ್ಯ ಗೌಡರ್ ಮಾಡ್ಯೊಳೊ ಬಲಿದಾನ
ಪಡ್ದಕೆ ನಾವಿಂದ್ ಅನಿಭವಿಸ್‌ತಿರ್‍ವ ಸ್ವಾತಂತ್ರ್ಯನ ॥
ನಾವಿಂದ್ ಯಾರಿಗೂ ಇಲ್ಲೆ ಕಮ್ಮಿ
ಎಲ್ಲಾ ಕ್ಷೇತ್ರಲೂ ವಳೋ ಪ್ರತಿಬೆನ ಹೊರಹೊಮ್ಮಿ ॥
ಪ್ರತಿ ಕುಟುಂಬಲಿ ಒಬ್ಬನಾದರೂ ಸೇರಿಟ್ಟು ಸೈನ್ಯ
ದೇಶ ಸೇವೆನ ಮಾಡ್ತುಟ್ಟು ಅವನೇ ಧನ್ಯ॥
ನಮ್ಮೊಳಗೆ ಬೇಕ್ ಒಗ್ಗಟ್ಟ್
ಒಗ್ಗಟ್ಟಿದ್ದರೆ ಬಾಳ್‌ಲಿ ಬಲವುಟ್ಟ್ ॥
ನಾವಾಡ್ವ ಭಾಷೆ ಅರೆಭಾಷೆ
ಅಪರೂಪದ ಭಾಷೆ ಅದ್ನ ನಾವ್ ಮರ್‍ಯಕಾದ್॥
ಭಾಷೆನ ನಾವ್ ಬಳ್ಸೋಕು
ಪದ್ಧತಿ ಸಂಸ್ಕೃತಿನ ಉಳ್ಸೋಕು ॥
ಭಾಷೆನ ಬಳ್ಸಿರೆ ಬೆಳ್ದದೆ
ಸಂಸ್ಕೃತಿ ಸಾಹಿತ್ಯ ಉಳ್ದದೆ॥
ಎಲ್ಲಾ ಭಾಷೆನ ಪ್ರೀತಿ ಮಾಡೋಕು
ಮನೆಲಿ ನಮ್ಮ ಭಾಷೆ ಮಾತಾಡೋಕು॥
ಎಲ್ಲರೊಟ್ಟಿಗೆ ಬಾಳಕು ಹೊಂದಿಕೊಂಡ್
ನಮ್ಮತನನ ಬಿಡದೆ ಇಟ್ಟ್‌ಕಂಡ್ ॥
ಗೌಡರ್ ನಾವ್ ಗೌಡರ್
ಹೆಮ್ಮೆನ ಕೊಡಗ್‌ನ ಗೌಡರ್॥



## ಅಪ್ಪ-ಕೂಸು

-ರಮ್ಯಶ್ರೀ ನಡುಮನೆ

ಕಾಲ ಕೆಟ್ಟುಟು ಮಗ! ಮಕ್ಕಳಿಗೆ ಪುರುಸೋತ್ತಿಲ್ಲ
ಅಯ್ಯಪ್ಪನ ನೋಡಿಕೆ ಹಳ್ಳಿಗೆ ಬಾಕೆ
ರಜೆ ಇದ್ದೊರೂ, ಹೋಗಿ ಬಾಕೆ ಅನುಕೂಲ ಇದ್ದರೂ
ಹೆತ್ತವ್ವ, ಅಪ್ಪನ ನೆಂಪಾಕಿಲೆ

ಮಂಜಣೆ ಮಾಡಿಕೆ ಕೈಲಿ ಕೊತ್ತಿ
ಬಿರ್ಸತ್ತಿಕೆ ಹೆಚ್ಚಿಕೆ ಜಾತಿನ ನಾಯಿ ಮರಿ
ಇಷ್ಟ ಬಂದ್ವಾಂಗೆ ಸುತ್ತಿಕೆ ದೋಸ್ತಿಗ
ಹೆಂಗೆ ಮಗ ಊರುನ ನೆಂಪಾದು???

ಗೇಂಟಿ ಅವ್ವ, ಚಾಮಿ ಮನೆ ದೊಡ್ಡವ್ವ
ನೀ ಯಾಗ ಬಾದೂಂತ ಕೇಳ್ದ
ಅದ್ಕೆ ಬಾಕೆ ಮೂಗು ಮುಟ್ಟ ಮನ್ಸುಟ್ಟಲ್ಲೇ
ರಜೆ ಇಲ್ಲೆಂತ ಹೇಳಿ ಅಲ್ಲಿಂದ ಹೊರ್ಟೆ ಮಗ

ಅಮ್ಮ, ನಿಮ್ಮ ದನ, ನಾಯಿ, ಕೊತ್ತಿ, ಮನೆ
ಎಲ್ಲಾ ಯಾಗೋಳು ನೆಂಪಾದೆ ಅಪ್ಪ
ಆಗಾಗ ಊರೂಗೆ ಬಂದರೆ ಕರ್ಚು ಅಲ
ನಿಮ್ಮ ಕನ್ಸುನ ನನ್ಸು ಮಾಡ್ದು ಹೆಂಗೆ ಅಪ್ಪ???

ಹಂಗೆನಾ ಮಗ! ಅದ್ಕೆ ತುಂಬ ದುಡ್ಡು ಬೇಕು
ಆದರೂ ಪ್ರಯತ್ನ ಬುಡ್ಬಡ ಮಗ
ಹಾ ಅಪ್ಪ! ಆದರೆ ಅಷ್ಟು ದುಡ್ಡು ಬೇಡ
ಹಂಗೆನೆ, ಆದ್ರ ಕೆಲ್ಸ ಸುರು ಆವ್ವು

ಏನು ಹೇಳ್ತೊಳ ಮಗ? ಅದು ಹೆಂಗೆ?
ಅದುವಾ..... ಅಯ್ಯಪ್ಪನ ಆಸ್ರಮಕ್ಕೆ ಕಳ್ಸಿರೆಲ
ಕಟ್ಟಡ ಕಟ್ಟಿಕೆ ದುಡ್ಡು ಬೇಕಾದು
ದೋಸ್ತಿಗಳ ಒಟ್ಟು ಸೇರ್ಸುದು, ವಿಮರ್ಷೆ ಮಾಡ್ದು

ಅಯ್ಯಪ್ಪ ನಮ್ಮ ಕೈಕಾಲು ಗಟ್ಟಿಮಾಡ್ದಕ್ಕೆ
ಅವು ಕೈಕಾಲು ಬೀಳ್ವ ಹೊತ್ತುಗೆ
ಆಸ್ರಮಕ್ಕೆ ಕಳ್ಸುವಷ್ಟು ಕ್ರೂರಿಗಾಕೆ ಬೊತ್ತು
ನಮ್ಮ ಮಕ್ಕಳ ಹಂಗೆ ನೋಡಿಕಣೊಕು
ನಾ ಹೇಳ್ತೊಳದು ಸರಿ ಅಲ ಅಪ್ಪ ❑

## ನನ್ನದೊಂದ್ ಕವಿತೆ



-ಪಟ್ಟಡ ದೀಕ್ಷಿ ಪ್ರಕಾಶ್
ಸೀಗೆಹೊಸುರು, ಸೋಮವಾರಪೇಟೆ

ಸಾಲ್ ಕವಿತೆಗಳ ಬರೆಕೆ ಗ್ಯಾನ
ಅದ್ ಅಸತ್ಯನ ಮೆಟ್ಟಿ
ಸತ್ಯದ ಬಾಗ್ಲ್ ತಟ್ಟುವ ಕವಿತೆ
ಎತ್ತರದ ಬಾನಲಿ
ಕಪ್ಪು ಮೋಡದ ನೊಡುಲಿ
ಬಾಳ್‌ಗೆ ಬೊಳ್ಪು ತೋರ್ಸುವ ಕವಿತೆ
ಕೋಟಿ ಹೃದಯಗಳ ನಾಡಿಲಿ
ಪ್ರತೀಕಾರದ ಕಿಚ್ಚ್‌ಗೆ
ತಣ್ಣೀರ್ ಚೋಂಪುವ ತಂಪು ಕವಿತೆ
ಜೀವಜಾಲಗಳ ವೇದನೆಗೆ
ತಂಪು ತಂಗಾಳಿ ಸೋಂಕುಸುವ ಕವಿತೆ
ನನ್ನವರ ಅವರ್ಲಿ
ಅವಮಾನದ ಕರಿ ಹೊಗೆ
ಮುತ್ತಿಕೆ ಮುಂದೆ ಕರ್ದ್
ಸಮಧಾನದ ಸೂರ್ಯ ರಶ್ಮಿ
ಮೂಡುಸುವ ಕವಿತೆ,
ಅದೇ ನನ್ನ ಕವಿತೆ ಆಕು.
ನನ್ನ ಪ್ರತಿ ಹೆಜ್ಜೆ ಹೆಜ್ಜೆಗೂ
ಅನುಮಾನಲೇ ನೋಡಿ
ಎಲ್ಲಿಗೂ ಅನ್ಯಾಯನ ಪ್ರಶ್ನೆ ಮಾಡಿಕೆ
ಮಾರ್ಗ ತೋರ್ಸದ ಈ ಸಮಾಜಲಿ
ಇಂದ್ರನ ವಜ್ರಾಯುದನಂಗೆ
ಹೊಳೆವ ಕವಿತೆ ನನ್ನದಾಕು
ಸಾವುನ ಹೆದ್ರಿಕೆಲಿ ನಲುಗಿ
ನೀರಾದ ಅಸಂಖ್ಯ ಜೀವಗಳಿಗೆ
ಧೈರ್ಯ ತುಂಬುವ ಕವಿತೆ ನಂದಾಕು
ಆಗ ನಾನೂ ನನ್ನ ಕವಿತೆನ
ಓದಿ ಹಿಗ್ಗಿ ಹೆಮ್ಮೆಂದ
ನಿಟ್ಟಿಸ್ರು ಬುಟ್ಟ್ ಸಮದಾನಲಿ
ಕಣ್ಣ್ ಮುಚ್ಚುಕನ ಒಳ್ಳ ಸಾವು ನಂದಾಕು
ಅದೇ ಸಾವು ಇನ್ನೊಂದು [illegible]
ಸ್ಫೂರ್ತಿ ತುಂಬುವ ಜೊ[illegible]

# ನಮ್ಮೂರ ಜಾತ್ರೆ



– ವಿನೋದ್ ಮೂಡಗದ್ದೆ

ನೆಂಪುಟ್ಟು ನಂಗೆ ಇನ್ನ್
ಅಮ್ಮನ ಕೈ ಹಿಡ್ಕಂಡ್ ಜಾತ್ರೆ ತಿರ್ಗಿದ್
ಬಣ್ಣ ಬಣ್ಣದಾ ಬುಗ್ಗೆ
ಕೈಲಿ ಇದ್ದರೆ ಮೋರೆ ತುಂಬಾ ನಗೆ
ಆಟದ ಬಾಣೆಲಿ ಬಂದುಟು ತರತರದ ಅಂಗಡಿಗ
ಇನ್ನೊಂದು ಮೂಲೆಲಿ ತಿರ್ಗ್‌ತಾ ಉಟ್ಟು ಆಟದ ದೊಡ್ಡ ಚಕ್ರ
ಸಣ್ಣ ಮಕ್ಕ ಚೇರಿ ಮರ್ಟವೆ
ಮಿಠಾಯಿ, ಆಟ ಸಾಮನ್‌ಗ ಬೇಕು ತೇಳಿ
ಕಂಬಳಿ, ಪಾತ್ರೆ, ಮನೆ ಸಾಮಾನ್‌ಗಳ ಅಂಗಡಿಲಿ
ಹೆಣ್ಣ್  ಮಕ್ಕ ಮಗ್ನರಾಗೊಳೊ ಚರ್ಚೆಲಿ
ಗೂಡೆಗ ಸುತ್ತುತ್ತಾ ಒಳೊ ಹೊಸ ಮಾದರಿ
ಬಟ್ಟೆನ ಹಿಡ್‌ಕಂಡ್
ಹೈದಂಗ ಕರಿ ಕನ್ನಡಿ ಹಾಕಿ ನಿತ್ತೊಳೊ
ನಿಂಬು ಸರ್ಬತ್ ಕುಡ್ಕಂಡ್
ಹೊರ್ಟತ್ ದೇವರ ತೇರ್
ಕೈ ಮುಗ್ದೊ ಭಕ್ತಿಲಿ ಜನಂಗ, ಕಷ್ಟಗಳ್‌ಂದ
ಮಾಡ್‌ದೇವರೇ ನಮ್ಮನ ಪಾರ್
ವರ್ಷಗಳ್‌ಂದ ಕಾದ್ದಿದ್ದ ಜಾತ್ರೆ ಮತ್ತೆ ಬಾತ್
ಮನ, ಮನೆಗ ಬಣ್ಣ ಬಣ್ಣಗಳ ವಸ್ತ್‌ಗಳ್‌ಂದ ಕೂಡ್ತ್
ಮತ್ತದೇ ಜಾತ್ರೆಗೆ ಹೋದೆ ವರ್ಷಗಳ ಕಳ್ದ್
ಜಾತ್ರೆನ ಗೌಜಿನ ಎಂತತ ಹೇಳ್ದು?
ಹೈದ ಗೂಡೆಗ ಪಟ್ಟಣ ಸೇರಿಯೊಳೊ
ಅಜ್ಜ ಅಜ್ಜಿ ಮನೆಲಿ ಒಳೊ
ಅಳಂಬುನಂಗೆ ಅಂಗಡಿಗ ಎದ್ದೊ
ಹೊಸ ಹೊಸ ನಮೂನೆನ ವಸ್ತುಗಳ ಇಸುದೊ
ಮುಗಿ ಬೀಳುವ ಜನಂಗ ಇಲ್ಲೆ,
ಸುತ್ತುವ ಮಕ್ಕ ಇಲ್ಲೆ
ಅಂಗಡಿಗ ಎಲ್ಲ ಖಾಲಿ ಖಾಲಿ
ಸಾಮಾನ್ ಮಾಡುವವು ಕಾಂಬಲೆ
ಜಾತ್ರೆ ವಸ್ತುಗ ಅಂತು ಬೇಡಕೇ ಬೇಡ
ಎಂದ್‌ನಂಗೆ ದೇವರ ತೇರು ಹೊರ್ಟತ್
ಕೈ ಮುಗಿಯವ್ ಮುಗ್ದೊ, ಸಪ್ಪೆ ಸಪ್ಪಲೇ
ಜಾತ್ರೆ ಮುಗ್ತ್
ಜನರೇ ಇಲ್ಲದೆ ಅದೇ ಮೂಲೆಲಿ ದೊಡ್ಡ ಚಕ್ರದಾಟ ತಿರುಗ್ತಾ ಉಟ್ಟು.

# ನೆಂಪಿನ ಚಿತ್ರಕೂಟ

## ವಿಚಾರ ಗೋಷ್ಠಿ



ಡಾ। ವಿಶ್ವನಾಥ ಬದಿಕಾನ
ಗೋಷ್ಠಿಯ ಅಧ್ಯಕ್ಷರ್



ಶ್ರೀ ಸೀತಾರಾಮ ಕೇವಳ
ವಿಚಾರ ಮಂಡನೆ



ಶ್ರೀಮತಿ ಶೈಲಜಾ ದಿನೇಶ್
ವಿಚಾರ ಮಂಡನೆ

## ಅರೆಭಾಷೆ ಕವಿ ಗೋಷ್ಠಿ




ಶ್ರೀ ಬಾರಿಯಂಡ ಜೋಯಪ್ಪ
ಅಧ್ಯಕ್ಷರ್



ಶ್ರೀ ಎಡಿಕೇರಿ ವಿಶ್ವನಾಥ



ಶ್ರೀ ವಿನೋದ್ ಮೂಡಗದ್ದೆ



ಶ್ರೀಮತಿ ಲೀಲಾದಾಮೋದರ



ಶ್ರೀಮತಿ ಕೃಪಾದೇವರಾಜ್ ಪೂಜಾರೀರ



ಶ್ರೀ ಸಂಜೀವ ಕುದ್ಪಾಜೆ



[illegible]

## ಸನ್ಮಾನ ಪುರಸ್ಕೃತರ್



ಶ್ರೀ ಹೊಸೂರು ಶಿವಪ್ರಕಾಶ್
(ಸಮಾಜ ಸೇವೆ)



ಶ್ರೀ ಪಿ. ಜಿ. ಅಂಬೆಕಲ್
(ಸಾಹಿತ್ಯ)



ಶ್ರೀ ಅತ್ಯಾಡಿ ಎಂ. ಪೂವಯ್ಯ
(ಸಂಸ್ಕೃತಿ)



ಶ್ರೀ ಹರಿಪ್ರಸಾದ್ ಅಡ್ತಂಗಾಯ
(ಪತ್ರಿಕೋದ್ಯಮ)



ಶ್ರೀ ಅಜಿರಂಗಲ ರಾಮಣ್ಣ
(ಕೃಷಿ)



ಶ್ರೀ ನಿಂಗರಾಜು ಸಂಗಾರು
(ಶಿಕ್ಷಣ)



ಕು। ನವನೀತ ಪಟ್ಟೆಮನೆ
(ಕ್ರೀಡೆ)



ಮಾ। ಅಮ್ಮಾಜೀರ ಹರ್ಷಿತ್
(ಯುವ ಸಾಧಕ)




ಪೊರ್ಲ್‌ನ ಸಭಾವೇದಿಕೆ



ಗ್ರಾಮ ದೇವತೆಗೆ ಪೂಜೆಮಾಡಿ
ಸಮಾರಂಭಕ್ಕೆ ಚಾಲನೆ



ಮೆರವಣಿಗೆಗೆ ಪೂರ್ಣಕುಂಭದ
ಮೆರ್‌ಗ್



ಮೆರವಣಿಗೆ ಉದ್ಘಾಟನೆ ಮಾಡಿ
ಶುಭಹಾರೈಸಿದ ಶ್ರೀ ಕೆದಂಬಾಡಿ ಈರಪ್ಪನವ್





ಗ್ರಾಮದೇವತೆ ಬಳಿ ಸಮ್ಮೇಳನ ಅಧ್ಯಕ್ಷರ್‌ಗೆ ಸ್ವಾಗತ



ಸಮ್ಮೇಳನ ಅಧ್ಯಕ್ಷರ ಮೆರವಣಿಗೆ



ಅಧ್ಯಕ್ಷರ ಮೆರವಣಿಗೆನ ಪೊರ್ಲ್‌ನ ದೃಶ್ಯ



ಸಮ್ಮೇಳನಕೆ ಮೆರ್‌ಗ್ ತಂದ ಸಭಾದ್ವಾರ



ಸಭಾದ್ವಾರದ ಉದ್ಘಾಟನೆ ಮಾಡ್ದ
ಶ್ರೀ ಹುಲಿಮನೆ ಮಾದಪ್ಪನವ್



ದ್ವಾರ ಉದ್ಘಾಟಕರಿಗೆ ನೆಂಪಿನ ಕಾಣಿಕೆ ನೀಡಿ
ಶುಭಕೋರ್ದ ಶ್ರೀ ಅಮ್ಮಾಜೀರ ಕಿರಣ್



ಶ್ರೀ ಕೀಜನ ನಾಣಯ್ಯನವ್
ಧ್ವಜಾರೋಹಣ ಮಾಡ್ದೊ



ಪುಸ್ತಕ ಪ್ರದರ್ಶನ ಉದ್ಘಾಟನೆ



ಪೂರ್ವಿಕರ್ ಬಳಸಿದ ವಸ್ತುಗಳ
ಪ್ರದರ್ಶನ ಉದ್ಘಾಟನೆ



ಅತಿಥಿಗಳ್‌ಂದ ಅರೆಭಾಷಿಕರ
ಸಾಂಪ್ರದಾಯಿಕ ವಸ್ತುಗಳ ವೀಕ್ಷಣೆ ನಡ್ತ್



ಸಮ್ಮೇಳನಲಿ ಚಿತ್ರಕಲಾ ಪ್ರದರ್ಶನ



ಸಮ್ಮೇಳನ ಅಧ್ಯಕ್ಷರ್‌ಗೆ ದುಡಿಯೊಂದಿಗೆ
ಸ್ವಾಗತ ಕೋರ್‍ದೊ



ಹಿತ್ತಲುಗದ್ದೆ ಗ್ರಾಮಸ್ಥರ್ ತಯಾರ್ ಮಾಡ್ದ
ಐನ್‌ಮನೆ ಸ್ಥಬ್ಧಚಿತ್ರ




ಸಭಾ ಕಾರ್ಯಕ್ರಮ
ನಿರೂಪಕರ ತಂಡ




ದೇವರ ಪ್ರಾರ್ಥನೆಂದ
ಸಮ್ಮೇಳನ ಸಭೆ ಸುರಾತ್



ಸುದ್ಧಿ ಮಾಡ್ದ ಪತ್ರಕರ್ತ ಮಿತ್ರರ್



ಸಮ್ಮೇಳನ ಅಧ್ಯಕ್ಷರ್‌ಗೆ ಶಾಲು ಹೊದ್ಸಿ
ಸ್ವಾಗತ ಕೋರ್ದ ಮಾನ್ಯ ಶಾಸಕರ್
ಶ್ರೀ ಕೊಂಬಾರನ ಜಿ. ಬೋಪಯ್ಯನವ್



ಮುಖ್ಯ ನೆಂಟ್ರಾದ ಶಾಸಕರ್
ಶ್ರೀ ಅಪ್ಪಚ್ಚು ರಂಜನವ್ಕೆ
ಸ್ವಾಗತ ಕೋರ್ದ ಆಲೂರು
ಅರೆಭಾಷೆ ಗೌಡ ಸಮಾಜದ
ಕಾರ್ಯದರ್ಶಿ
ಶ್ರೀ ಕುಯ್ಯಮುಡಿ ಜಯಕುಮಾರ್‌ನವ್



ಮುಖ್ಯ ನೆಂಟ್ರಾದ
ಶ್ರೀ ಎಸ್. ಜಿ. ಮೇದಪ್ಪನವ್ಕೆ
ನೆಂಪಿನ ಕಾಣಿಕೆ ನೀಡ್ದ
ಗೌಡ ಸಮಾಜದ ಕೋಶಾಧಿಕಾರಿಗ
ಶ್ರೀ ಅಜರಂಗಲ ರಾಮಣ್ಣನವ್



ಅರೆಭಾಷಾ ಸಾಹಿತ್ಯ
ಅಭಿಮಾನಿಗಳ್‌ಂದ
ಭರ್ತಿಯಾದ ಸಭಾಭವನ



ನೆಂಟ್ರ್‌ಗಳಿಗೆ ಸ್ವಾಗತ ಕೋರ್ದ
ಶ್ರೀ ಧನಂಜಯ ಅಗೋಳಿಕಜೆ,
ಸದಸ್ಯರ್, ಕರ್ನಾಟಕ ಅರೆಭಾಷೆ
ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಅಕಾಡೆಮಿ ಅಧ್ಯಕ್ಷರ್
ಶ್ರೀ ಲಕ್ಷ್ಮೀನಾರಾಯಣ
ಕಜೆಗದ್ದೆಯವರಿಂದ
ಆಶಯ ಮಾತ್



ದೀಪ ಬೆಳ್‌ಗಿಸಿ ಚಾಲನೆ



ಭತ್ತನ ಪರೆಗೆ ಸುರ್ದ್ ಪ್ರೇರಣೆ




ಸಮ್ಮೇಳನದ ಉದ್ಘಾಟನಾ ಭಾಷಣ
ಮಾಡಿ ಶುಭ ಹಾರೈಸಿದ ಕೇಂದ್ರ
ಮಂತ್ರಿಗ – ಶ್ರೀ ದೇವರಗುಂಡ
ವಿ. ಸದಾನಂದ ಗೌಡ್ರ್‌ನವ್



ಪುಂಸ್ತ್ರೀ, ಕಲ್ಯಾಣ ಸ್ವಾಮಿ
ಅಪೂರ್ವ ಸಂಗಮ
ಪುಸ್ತಕಗಳ ಬುಡ್ಗಡೆ




ಪುಸ್ತಕ ಬುಡ್ಗಡೆ ಮಾಡಿ ಶುಭ ಹಾರೈಸಿದ
ಶಾಸಕರ್ – ಮಾನ್ಯ
ಶ್ರೀ ಅಪ್ಪಚ್ಚು ರಂಜನ್‌ನವ್



ಸಭೆಗೆ ಸಾಕ್ಷಿಯಾದ ಅರೆಭಾಷೆ ಅಭಿಮಾನಿಗ ಮತ್ತೆ ನೆಂಟ್ರ್‌ಗ



ವೇದಿಕೇಂದ ಸಮ್ಮೇಳನದ
ಪೊಲ್‌ನ ನೋಟ



'ಐಮರ' ಸ್ಮರಣ ಸಂಚಿಕೆ ಸಾಂಕೇತಿಕ
ಅನಾವರಣ




ಸ್ಮರಣ ಸಂಚಿಕೆ 'ಐಮರ' ಬುಡ್ಗಡೆ ಮಾಡಿ ಮಾತಾಡ್ದ
ಶಾಸಕರ್ ಶ್ರೀ ಕೊಂಬಾರನ ಬೋಪಯ್ಯನವ್



'ಹಿಂಗಾರ' ಪುಸ್ತಕ ಪ್ರದರ್ಶಿಸಿದ
ಮುಖ್ಯ ನೆಂಟ್ರ್‌ಗ




ಪೂರ್ವಾಧ್ಯಕ್ಷರಾದ
ಶ್ರೀ ಕೊಲ್ಯದ ಗಿರೀಶ್‌ನವ್
ಮಾತಾಡ್ದೊ




ಪೂರ್ವಾಧ್ಯಕ್ಷರಾದ
ಶ್ರೀ ಪಿ. ಸಿ. ಜಯರಾಂನವ್
ಶುಭಹಾರೈಸಿದೊ



ಸಮ್ಮೇಳನ ಅಧ್ಯಕ್ಷರೊಟ್ಟಿಗೆ
ಅರೆಭಾಷೆ ಸಾಹಿತ್ಯದ ಬಗ್ಗೆ ಗಾಢ
ಚರ್ಚೆಲಿ ಕೇಂದ್ರ ಸಚಿವರ್
ಮತ್ತೆ ಶಾಸಕರ್




ಸಮ್ಮೇಳನ ಅಧ್ಯಕ್ಷರ
ಪರ್‌ಚಯನ ಮಾಡಿಕೊಟ್ಟ
ಡಾ। ದಯಾನಂದ
ಕೂಡಕಂಡಿನವ್



ಆಲೂರು ಸಿದ್ಧಾಪುರ ಅರೆಭಾಷೆ
ಗೌಡ ಸಮಾಜದ ಕಾರ್ಯದರ್ಶಿ
ಶ್ರೀ ಕುಯ್ಯಮುಡಿ ಜಯಕುಮಾರ್‌ನವ್
ಕಾರ್ಯಕ್ರಮಕ್ಕೆ ಧನ್ಯವಾದ ಹೇಳ್ದೊ



ಮುಖ್ಯ ನೆಂಟ್ರ್‌ಗಳಿಗೆ ಊಟದ ವ್ಯವಸ್ಥೆ



ಅರೆಭಾಷೆ ಸಾಹಿತ್ಯಾಭಿಮಾನಿಗಳಿಗೆ
ಅಚ್ಚುಕಟ್ಟಾದ ಊಟದ ವ್ಯವಸ್ಥೆ ಮಾಡ್ದ
ಶ್ರೀ ಕೆದಂಬಾಡಿ ಮಧುಶಂಕರ್
ಮತ್ತೆ ತಂಡದವ್



ವಿಚಾರಗೋಷ್ಠಿಗೆ ಸ್ವಾಗತ ಮಾಡ್ದ
ಶ್ರೀ ಕುಡಕಲ್ ಸಂತೋಷ್



ವಿಚಾರಗೋಷ್ಠಿಯ ಅಧ್ಯಕ್ಷರಾದ
ಡಾ। ವಿಶ್ವನಾಥ ಬದಿಕಾನನವ್



ವಿಚಾರ ಮಂಡನೆ ಮಾಡ್ದ ಶ್ರೀಮತಿ ಶೈಲಜಾ ದಿನೇಶ್‌ನವ್ಗೆ
ನೆಂಪಿನ ಕಾಣಿಕೆ




ವಿಚಾರ ಮಂಡನೆ ಮಾಡ್ದ
ಶ್ರೀ ಸೀತಾರಾಮ ಕೇವಳನವ್



ಲೋಕೇಶ್ ಊರುಬೈಲು
ಮತ್ತ್ ಕೂಟದವರ್‌ಂದ
ಸಿರಿಸುಗ್ಗಿ ಜನಪದ ಶೈಲಿಯ
ಅರೆಭಾಷೆ ಹಾಡ್‌ಗ




ಕವಿಗೋಷ್ಠಿಲಿ ಭಾಗವಹಿಸಿದ ಕವಿಗ




ಕವಿಗೋಷ್ಠಿ ನಡೆಸಿಕೊಟ್ಟ ಕವಿಗಳಿಗೆ ಧನ್ಯವಾದ ತಿಳ್ಸಿದ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವ್



ಸಾಹಿತ್ಯ ಸಮ್ಮೇಳನ ನಡ್ಸಿಕೊಟ್ಟ್ ಸರ್ವರೀತಿಲಿ
ಸಹಕಾರ ನೀಡ್ದ ಅಕಾಡೆಮಿ ಅಧ್ಯಕ್ಷರ್ ಮತ್ತೆ ಸದಸ್ಯರ್‌ಗೆ
ಆಲೂರು ಗೌಡ ಸಮಾಜದ ಪರವಾಗಿ ಗೌರವ ಸಮರ್ಪಣೆ



ಅಕಾಡೆಮಿ ಅಧ್ಯಕ್ಷರ್
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವ್ಕೆ
ಸಂಗಯ್ಯನಪುರ ಅರೆಭಾಷೆ ಗೌಡ
ಸಮಾಜದ ಗೌರವ ಅಧ್ಯಕ್ಷರಾದ
ಶ್ರೀ ಬಟ್ಯನ ಈರಪ್ಪನವ್
ನೆಂಪಿನ ಕಾಣಿಕೆ ನೀಡ್ದೊ




ಸಮಾರೋಪ ಮಾತ್ ಆಡ್ದ
ಡಾ। ಕೊಳಂಬೆ ಚಿದಾನಂದ
ಗೌಡ್ರ್‌ನವ್




ಅರೆಭಾಷೆ ಸಾಹಿತ್ಯ ಸಮ್ಮೇಳನದ ಬಗ್ಗೆ
ಅನಿಸಿಕೆ ಮತ್ತೆ ವಿಚಾರ ಮಂಡನೆ ಮಾಡ್ದ
ಶ್ರೀ ಸೂರ್ತಲೆ ಆರ್. ಸೋಮಣ್ಣನವ್,
ಅಧ್ಯಕ್ಷರ್, ಕೊಡಗು ಗೌಡ ಸಮಾಜಗಳ
ಒಕ್ಕೂಟ



ಸಾಧನೆ ಮಾಡ್ದ
ಸಾಧಕರಿಗೆ
ಸನ್ಮಾನ ಗೌರವ



ಸನ್ಮಾನಿತರಿಗೆ ಅಭಿನಂದನಾ ಮಾತ್
- ಶ್ರೀ ರಾಜೇಶ್ ತೇನನನವ್



ಸನ್ಮಾನಿತರಿಗೆ ಅಭಿನಂದನಾ ಮಾತ್
- ಶ್ರೀಮತಿ ವೀಣಾ ಅಚ್ಚಯ್ಯ ವಿಧಾನಪರಿಷತ್ ಸದಸ್ಯರ್



ಸರ್ವ ಅರೆಭಾಷೆ ಸಾಹಿತ್ಯಾಭಿಮಾನಿಗಳ್‌ಗೆ ಶುಭಕೋರಿ ಮುಕ್ತಾಯ ಮಾತ್ ಆಡ್ದ ಸಮ್ಮೇಳನಾಧ್ಯಕ್ಷರ್- ಶ್ರೀ ಭವಾನಿಶಂಕರ ಹೊದ್ದೆಟ್ಟಿನವ್



ಸಮ್ಮೇಳನಾಧ್ಯಕ್ಷರ್‌ಗೆ ಗೌರವ ಸಮರ್ಪಣೆ



ಆಲೂರು ಅರೆಭಾಷೆ ಗೌಡ ಸಮಾಜದ ಅಧ್ಯಕ್ಷರ್ ಮತ್ತೆ ಕಾರ್ಯದರ್ಶಿಯವ್ಕೆ ಸಮಾಜದ ಸರ್ವರ ಪರವಾಗಿ ಗೌರವ ಸಮರ್ಪಣೆ



ಧ್ವಜಾರೋಹಣ ನಡ್ಸಿಕೊಟ್ಟ ದೈಹಿಕ ಶಿಕ್ಷಕರಿಗೆ ನೆಂಪಿನ ಕಾಣಿಕೆ







“ನಾಡ್‌ನ ಸಂಸ್ಕೃತಿ ಹಿರಿಮೆ”
ನಾಟ್ಯ ರೂಪಕ ನಡ್ಸಿಕೊಟ್ಟ
ಶ್ರೀ ಅಮ್ಮಾಜೀರ ಪೊನ್ನಪ್ಪನವ್ಕೆ
ಗೌರವ ಸಮರ್ಪಣೆ





ಶ್ರೀ ಅಮ್ಮಾಜೀರ
ಪೊನ್ನಪ್ಪನವರ
ಕಾವೇರಿ ನಾಡ್
ಕಲಾತಂಡ

## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್







### ಆಲೂರು ಸಿದ್ಧಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿಯಮಿತ

ಆಲೂರು ಸಿದ್ಧಾಪುರ, ಸೋಮವಾರಪೇಟೆ ತಾಲೂಕು, ಕೊಡಗು ಜಿಲ್ಲೆ – 571235



ಆಡಳಿತ ಮಂಡಳಿಯವ್ ಮತ್ತೆ ಸದಸ್ಯರ್‌ಗ



# ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್



ಶ್ರೀ ಬೆಳಿಯಮನ ದುರ್ಗರಾಜ್, ಶ್ರೀಮತಿ ಶೋಭಾವತಿ ಸಿ.ಡಿ.
ಸಿ.ಡಿ. ಮಿಲನ್ (ಮಂಜ) ಸಿ.ಎಮ್. ಅಭಿಲಾಷ (ಸೊಸೆ) ಮತ್ತ ಕುಟುಂಬಸ್ಥರ್
ಮಾಲಂಬಿ ಗ್ರಾಮ



ಕುಂಡ್ಯನ ಶ್ರೀಮತಿ ಲೀಲಾವತಿ, ಕುಂಡ್ಯನ ಶ್ರೀ ರಾಮಯ್ಯ
ಮತ್ತ ಕುಟುಂಬಸ್ಥರ್

# ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

ಶ್ರೀ ಕುಟ್ಟನ ಅನಿಲ್,
ಶ್ರೀಮತಿ ಕಲ್ಪಶ್ರೀ
ಕು. ಹೋಮಿಕ
ಅಬ್ಬೂರು ಕಟ್ಟೆ

ವಿದ್ಯುತ್ ಮತ್ತು ಪ್ಲಂಬಿಂಗ್ ಗುತ್ತಿಗೆದಾರರು
ಮೊ: 9449949121, 9449921104

ಶ್ರೀ ಟಿ. ಪಿ. ವಿಜಯ ಮತ್ತು ಕುಟುಂಬಸ್ಥರು
ವಿ.ಎಸ್.ಎಸ್.ಎನ್. ನಿರ್ದೇಶಕರು, ಹಣ್ಣು ಮತ್ತು ತರಕಾರಿ ವ್ಯಾಪಾರಿಗಳು
ಆಲೂರು ಸಿದ್ಧಾಪುರ
Mob: 9483834656

# ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

ಶ್ರೀಮತಿ ಸವಿತಾ ಮತ್ತ ಶ್ರೀ ಅಮ್ಮಾಜೀರ ಕಿರಣ್
ಹರ್ಷಿತ್. ಚಾರ್ವಿಕಿರಣ್ ಮತ್ತ ಕುಟುಂಬಸ್ಥರ್
ಸಿದ್ಧಲಿಂಗಪುರ

ಶ್ರೀ ಪಳಂಗೋಟು ಜೆ. ರೋಹಿತಾಕ್ಷ ಮತ್ತ ಶ್ರೀಮತಿ ಪಾರ್ವತಿ ರೋಹಿತಾಕ್ಷ
ಮತ್ತ ಕುಟುಂಬಸ್ಥರ್
ಕೂಡುರಸ್ತೆ, ಮಾಲಂಬಿ ಗ್ರಾಮ

# ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

ಚೈಮುನ ರಾಘವಯ್ಯ, ಪ್ರಮೀಳ ರಾಘವಯ್ಯ
ಮತ್ತ ಕುಟುಂಬಸ್ಥರ್
ಆಲೂರು ಸಿದ್ಧಾಪುರ

ಡಾ| ಪುರುಷೋತ್ತಮ ಕೆ. ವಿ. ಕರಂಗಲ್ಲು
ಪ್ರಾಂಶುಪಾಲರು, ಮೊಂಪೈ ಕಾಲೇಜು ಐಕಳ
ಶ್ರೀಮತಿ ವಿಜಯಲಕ್ಷ್ಮಿ,
ತ್ರಿಶೂಲ್ ತೇಜಸ್ವಿ ಕೆ. ಪಿ.,
ಪ್ರತ್ಯೂಷ್ ತೇಜಸ್ವಿ ಕೆ. ಪಿ.
ಮತ್ತ ಕುಟುಂಬಸ್ಥರ್

## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

ಯಶಸ್. ನಿಭಾ. ಧನುಷ್

ಮಧುಶಂಕರ. ಅನಿಲ್ ಕುಮಾರ್. ಈರಪ್ಪ. ತಾಯಮ್ಮ. ಸತೀಶ್. ಪ್ರಿಯಾಂಶ್

ಜೀವಿತ. ಸುಧಾ. ದಿತಿನ್. ಅನಿತ. ದೀವಿಕ್

ಮತ್ತೆ ಕೆದಂಬಾಡಿ ಕುಟುಂಬಸ್ಥರ್, ಸಂಗಯ್ಯನಪುರ



### ಸಾಯಿ ಎಜ್ಯುಕೇಶನ್ ಟ್ರಸ್ಟ್ (ರಿ.) ಜಾನಕಿ ಕಾಳಪ್ಪ ಸ್ಕೂಲ್

(ಪ್ರೈಮರಿಯಿಂದ 10ನೇ ತರಗತಿಯವರೆಗೆ – ಆಂಗ್ಲ ಮಾಧ್ಯಮ)

ಆಲೂರು ಸಿದ್ಧಾಪುರ, ಸೋಮವಾರಪೇಟೆ ತಾಲೂಕು,

ಕೊಡಗು – 571235

ಮೊ: 9483834549, 9483834548

## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್



**ಶ್ರೀ ಪರ್ಲಕೋಟಿ ಸತೀಶ್ ಕುಮಾರ್ ಮತ್ತೆ ಕುಟುಂಬಸ್ಥರ್**

ಆಲೂರು ಸಿದ್ಧಾಪುರ




# ಅರೆಭಾಷೆ ಗೌಡ ಸಮಾಜದ ಆಡಳಿತ ಮಂಡಳಿ

## ಆಲೂರು ಸಿದ್ಧಾಪುರ - ಸಂಗಯ್ಯನಪುರ

## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್



ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

ಶ್ರೀ ಕುಯ್ಯಮುಡಿ ಯು. ರಮೇಶ್ (ರವಿ)

ಶ್ರೀಮತಿ ಧನಲಕ್ಷ್ಮಿ (ಭಾಗಿ)

ಕು। ಕಿರಣ್, ಕು। ಬೀನಾ ಮತ್ತೆ ಕುಟುಂಬಸ್ಥರ್

ಆಲೂರು ಸಿದ್ಧಾಪುರ





## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್



# ಶ್ರೀ ನಂಗಾರು ರಾಮಯ್ಯ ಮತ್ತು ಶ್ರೀಮತಿ ಮಾಚಮ್ಮ

ಇವರು ಆದರ್ಶ ದಂಪತಿಗಳಾಗಿ ಬದುಕಿ ಸಮಾಜದ ಉನ್ನತಿಗಾಗಿ ಅವಿಶ್ರಾಂತವಾಗಿ ದುಡಿದವರು. ದೂರದ ಭಾಗಮಂಡಲ ನಾಡಿನಿಂದ 50ರ ದಶಕದಲ್ಲಿ ಸಂಗಯ್ಯನಪುರ ಊರಿಗೆ ಬಂದು ನೆಲೆಸಿ, ಭೂತಾಯಿಯನ್ನು ನಂಬಿ ಮಾದರಿ ಕೃಷಿಕರಾಗಿ ದುಡಿದು, ತಾವು ಅನಕ್ಷರಸ್ಥರಾದರೂ, ಮಕ್ಕಳನ್ನು ವಿದ್ಯಾವಂತರಾಗಿ ಮಾಡಿ ಕುಟುಂಬದಲ್ಲಿ ಒಟ್ಟು 3 ಕೆ.ಎ.ಯಸ್. ಆಫೀಸರ್‌ಗಳನ್ನಾಗಿ ಮಾಡಿದ ಕೀರ್ತಿ ಇವರದು! ಶಾಲೆ, ರಸ್ತೆ ಮತ್ತು ಕೆರೆಕಟ್ಟೆಗಳನ್ನು ನಿರ್ಮಾಣ ಮಾಡುವುದರಲ್ಲಿ ಶ್ರೀ ರಾಮಯ್ಯನವರು ಮೊದಲಿಗರು! ಶ್ರೀಮತಿ ಮಾಚಮ್ಮನವರು ಗಣಗೂರು ಗ್ರಾಮ ಪಂಚಾಯಿತಿ ಸದಸ್ಯೆಯಾಗಿ ಅವಿಶ್ರಾಂತವಾಗಿ ದುಡಿದಿದ್ದಾರೆ. ದಾನ ಧರ್ಮ ಮಾಡುವುದರಲ್ಲಿ ಎತ್ತಿದ ಕೈ, ಆದುದರಿಂದಲೇ ಇವರನ್ನು ಊರಿನ ಜನ ಪ್ರೀತಿಯಿಂದ 'ಅವ್ವ' ಎಂದೇ ಸಂಭೋದಿಸುತ್ತಿದ್ದರು!

## ಶುಭಕೋರುವವರು

ಮಕ್ಕಳಾದ

**ನಂಗಾರು ನಾಣಯ್ಯ, ಮೋಹನ್, ಯಶೋಧಾ,**
**ವಸಂತಿ ನಿಂಗರಾಜು ಮತ್ತು ಅಳಿಯಂದಿರು**
**ಸೊಸೆಯಂದಿರು ಹಾಗೂ ಮೊಮ್ಮಕ್ಕಳು**

## ಅರೆಭಾಷೆ ಸಾಹಿತ್ಯ ಸಮ್ಮೇಳನಕ್ಕೆ ಶುಭಕೋರುವವ್

**ಶ್ರೀ ಕುಯ್ಯಮುಡಿ ವಿ. ಜಯಕುಮಾರ್ (ಶೇಖರ್)**

**ಶ್ರೀಮತಿ ಲೀಲಾವತಿ (ಅವ್ವ), ಶ್ರೀಮತಿ ಕುಸುಮ, ಪ್ರಕೃತಿ, ನಮನ ಮತ್ತೆ ಕುಟುಂಬಸ್ಥರ್**

ಆಲೂರು ಸಿದ್ಧಾಪುರ

# ಶ್ರೀ ಬಾಲಾಜಿ ಟ್ರೇಡರ್ಸ್

ಆಲೂರು ಸಿದ್ಧಾಪುರ

- ಕೆಮಿಕಲ್ಸ್, ರಸಗೊಬ್ಬರ, ಬಿತ್ತನೆಬೀಜಗಳು
- ಸಿಮೆಂಟ್ ಮತ್ತು ಹಾರ್ಡ್‌ವೇರ್ಸ್
- ನೀರಾವರಿ ಪೈಪುಗಳು
  ಮೈಕ್ರೋ ಇರಿಗೇಷನ್ ಪೈಪ್ಸ್ & ಫಿಟ್ಟಿಂಗ್ಸ್






ಶ್ರೀ ಕುಯ್ಯಮುಡಿ ವಿ. ಜಯಕುಮಾರ್ (ಶೇಖರ)
ವ್ಯಾಪಾರಿಗಳು
Mob: 9483834640, 9880370940

## ಕರ್ನಾಟಕ ಅರೆಭಾಷೆ ಅಕಾಡೆಮಿ ಸದಸ್ಯರ್‌ಗ


ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
**ಅಧ್ಯಕ್ಷರ್**


ಚಿನ್ನಸ್ವಾಮಿ
**ರಿಜಿಸ್ಟ್ರಾರ್**

### ಸದಸ್ಯರ್


ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ


ಶ್ರೀಮತಿ ಸ್ಮಿತಾ ಅಮೃತರಾಜ್


ಶ್ರೀಮತಿ ಚೊಕ್ಕಾಡಿ
ಪ್ರೇಮ ರಾಘವಯ್ಯ


ಶ್ರೀ ಧನಂಜಯ ಅಗೋಳಿಕಜೆ


ಶ್ರೀ ದಂಬೆಕೋಡಿ ಯಸ್. ಆನಂದ


ಡಾ. ದಯಾನಂದ ಕೆ. ಸಿ.


ಡಾ. ವಿಶ್ವನಾಥ ಬದಿಕಾನ


ಶ್ರೀ ಜಯಪ್ರಕಾಶ್ ಎಂ. ಎಸ್.


ಡಾ. ಪುರುಷೋತ್ತಮ ಕೆ. ವಿ.
ಕರಂಗಲ್ಲು


ಶ್ರೀ ಪುರುಷೋತ್ತಮ
ಕಿರ್ಲಾಯ


ಶ್ರೀ ಕುಸುಮಾಧರ ಎ. ಟಿ.


ಶ್ರೀ ಕಿರಣ್ ಕುಂಬಳಚೇರಿ


ಶ್ರೀ ಭರತೇಶ್
ಅಲಸಂಡೆಮಜಲು